Approved by the Department of Public Instruction

# ಕರ್ನಾಟಕ ಸ್ಕೌಟ್ ಮತ್ತು ಗೈಡ್

# The Karnataka Scout and Guide

ಸಂಪುಟ : 79 ಜೂಲೈ–ಆಗಸ್ಟ್–ಸೆಪ್ಟಂಬರ್ 1995 ಸಂಚಿಕೆ : 4-5-6





The Karnataka Scout and Guide

July-Aug.-Sept. 1995
Vol. 79 No. 4-5-6



## CONTENTS



**FRONT PAGE PHOTO**

Participants of Air Scouters/Guiders Course with Sri Devraj, Secretary H.A L. Technical Society. Flying Semi Control & Radio Control Models in foreground.

# 20 ನೆಯ ಕಬ್ ಬುಲ್‌ಬುಲ್ ಉತ್ಸವ

ಕರ್ನಾಟಕ ರಾಜ್ಯದ 20 ನೆಯ ರಾಜ್ಯಮಟ್ಟದ ಕಬ್ ಬುಲ್‌ಬುಲ್ ಉತ್ಸವವು, ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕು ಉಜಿರೆಯಲ್ಲಿ (ಧರ್ಮಸ್ಥಳದ ಬಳಿ)

**27-12-1995** ರಿಂದ **30-12-1995** ರ ವರೆಗೆ

ದಕ್ಷಿಣ ಕನ್ನಡ ಜಿಲ್ಲಾ ಸಮಿತಿ ಆತಿಥ್ಯ ಆಹ್ವಾನದ ಮೇರೆಗೆ ನಡೆಯಲಿದೆ.

ಹೆಚ್ಚಿನ ವಿವರಗಳಿಗೆ :

ಕಾರ್ಯದರ್ಶಿಗಳು
ದಕ್ಷಿಣ ಕನ್ನಡ ಜಿಲ್ಲಾ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ
ಕೈರನ್ನ ಬಿಲ್ಡಿಂಗ್ಸ್, ಬಾಲ್‌ಮಟ್ಟ ಹೊಸರಸ್ತೆ, ಮಂಗಳೂರು – 1

ಇವರಿಂದ ಪಡೆಯಬಹುದು.

**ಕೊಂಡಜ್ಜಿ ಬ. ಷಣ್ಮುಖಪ್ಪ**
ರಾಜ್ಯ ಮುಖ್ಯ ಆಯುಕ್ತರು

ಆತ್ಮೀಯ ಬಂಧುಗಳೇ,

ಅವ್ಯಾಹತವಾಗಿ ರಾಜ್ಯಾದ್ಯಂತ ಜರುಗುತ್ತಿರುವ ಸ್ಕೌಟ್, ಗೈಡ್ ಚಟುವಟಿಕೆಗಳು, ಸಂಸ್ಥೆಯ ಅನೇಕಾನೇಕ ನಿಸ್ವಾರ್ಥ ಕಾರ್ಯಕರ್ತರ ಕರ್ತೃತ್ವ ಶಕ್ತಿ ಮತ್ತು ನಿಷ್ಠೆಯ ಪ್ರತೀಕವಾಗಿದೆಯೆಂದರೆ ಅತಿಶಯೋಕ್ತಿಯೇನಲ್ಲ.

ಹಲವಾರು ಅಡಚಣೆಗಳ ಮಧ್ಯೆಯೂ, ಸ್ಕೌಟ್, ಗೈಡ್ ಶಿಬಿರಗಳು, ತರಬೇತಿಗಳು, ರ್‍ಯಾಲಿಗಳು, ನಿರಂತರವಾಗಿ ರಾಜ್ಯದಾದ್ಯಂತ ಸಾಗುತ್ತಿವೆ. ಸ್ಥಳೀಯ ಸಂಸ್ಥೆಗಳ, ಜಿಲ್ಲಾ ಸಂಸ್ಥೆಗಳ ಆಶ್ರಯದಲ್ಲಿ ವಿಪುಲವಾದ ಚೈತನ್ಯ ಪೂರ್ಣವಾದ ಕಾರ್ಯಕ್ರಮಗಳನ್ನು ಮಕ್ಕಳಿಗೆ ನೀಡಲಾಗುತ್ತಿದೆ.

ಈ ಅವಧಿಯಲ್ಲಿ ಇಂಜನಿಯರಿಂಗ್ ಮತ್ತು ಮೆಡಿಕಲ್ ಪ್ರವೇಶಗಳಿಗಾಗಿ ಸ್ಕೌಟ್ ಗೈಡ್ ಸಂಸ್ಥೆಗೆ ಮೀಸಲಿರಿಸಿದ ಸ್ಥಾನಗಳಿಗಾಗಿ ಸಂದರ್ಶನ ನಡೆಸಲಾಗಿದೆ. ಹತ್ತು ಇಂಜನಿಯರಿಂಗ್, ಎರಡು ಮೆಡಿಕಲ್, ಒಂದು ಡೆಂಟಲ್ ಸ್ಥಾನಗಳಿಗೆ ನಮ್ಮ ಪ್ರೆಸಿಡೆಂಟ್ ಸ್ಕೌಟ್, ಗೈಡ್‌ಗಳು ಆಯ್ಕೆಯಾಗಿದ್ದಾರೆ.

ಈ ಬಗ್ಗೆ ಅನೇಕ ಮೂಲಗಳಿಂದ ಇನ್ನೂ ಹಲವಾರು ಸಲಹೆಗಳು, ಸೂಚನೆಗಳು ಬರುತ್ತಿವೆ. ಸ್ಕೌಟ್ ಗೈಡ್ ಮೀಸಲಾತಿ ಸ್ಥಾನಗಳನ್ನು ಕೃಷಿ ವಿದ್ಯಾಲಯಗಳಿಗೆ, ಆಯುರ್ವೇದ ಕಾಲೇಜುಗಳಿಗೆ, ಪಶುಸಾಕಣಾ ಶಾಸ್ತ್ರದ ಕಾಲೇಜುಗಳಿಗೆ, ಔಷಧ ಶಾಸ್ತ್ರದ ಕಾಲೇಜುಗಳಿಗೆ, ಮೀನು ಸಾಕಣಾ ಕಾಲೇಜುಗಳಿಗೆ ಸ್ನಾತಕೋತ್ತರ ವಿಭಾಗಗಳಿಗೆ ಅನ್ವಯಿಸುವ ಹಾಗೆ ನಾವು ಸರಕಾರಕ್ಕೆ ಈಗಾಗಲೇ ಮನವಿ ಮಾಡಲಾಗಿದೆ. ಪ್ರಾಯಶಃ ಮುಂದಿನ ಬಾರಿ (ವರ್ಷ) ಸಂದರ್ಶನ ನಡೆಯುವ ಸಮಯಕ್ಕೆ ಈ ನಿಟ್ಟಿನಲ್ಲಿ ನಾವು ಇನ್ನೂ ಪ್ರಗತಿಯತ್ತ ಮುಂದುವರಿದಿರುತ್ತೇವೆ ಎಂದು ನನ್ನ ದೃಢನಂಬಿಕೆ.

ಸೆಪ್ಟೆಂಬರ್ 15, 16, 17 ರಂದು ಧಾರವಾಡದಲ್ಲಿ ನಡೆದ ಹಿಮಾಲಯ ವುಡ್ ಬ್ಯಾಡ್ಜ್ ಪದವೀಧರರ ರಾಜ್ಯ ಮಟ್ಟದ ಶಿಬಿರ ಅತ್ಯಂತ ಸ್ಮರಣೀಯವಾಗಿತ್ತು. 190 ಕ್ಕೂ ಹೆಚ್ಚು ಹಿಮಾಲಯ ವುಡ್ ಬ್ಯಾಡ್ಜ್ ಪ್ರಶಸ್ತಿ ಪಡೆದ ಶಿಕ್ಷಕ–ಶಿಕ್ಷಕಿಯರು ಕರ್ನಾಟಕದ ಎಲ್ಲ ವಿಭಾಗಗಳಿಂದಲೂ ಬಂದು ಸಕ್ರಿಯವಾಗಿ ಭಾಗ ವಹಿಸಿದ್ದರು. ಧಾರವಾಡ ಜಿಲ್ಲಾ ಸಂಸ್ಥೆಯ ಎಲ್ಲ ಪದಾಧಿಕಾರಿಗಳಿಗೆ ರಾಜ್ಯ ಸಂಸ್ಥೆಯ ಪರವಾಗಿ ಅದರಲ್ಲೂ ವಿಶೇಷವಾಗಿ ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಬಿ.ಜಿ. ದೊಡ್ಡಮನಿ, ಖಜಾಂಚಿಗಳಾದ ಶ್ರೀ ಎಂ.ಜಿ. ಭಿಲ್ಲೆ, ಹಿರಿಯ ಸ್ಕೌಟ್ ನಾಯಕರೂ, ಜಿಲ್ಲಾ ಸಂಸ್ಥೆಯಲ್ಲಿ 3 ದಶಕಗಳಿಂದಲೂ ಸಕ್ರಿಯವಾಗಿ ತನ್ನನ್ನೇ ತೊಡಗಿಸಿಕೊಂಡಿರುವ ಶ್ರೀ ಎಂ. ಎಂ. ಲೋಂಡೆ, ಜಿಲ್ಲಾ ಕಾರ್ಯದರ್ಶಿ, ಶ್ರೀಮತಿ ಪ್ರೇಮಾ ಸಿ. ಮಂಗಳೂರ್, ಮತ್ತಿತರರಿಗೆ ನನ್ನ ಹೃತ್ಪೂರ್ವಕ ಧನ್ಯವಾದಗಳು.

ಈ ಬಾರಿ ರಾಜ್ಯದಿಂದ 8 ಜನ ಅಭ್ಯರ್ಥಿಗಳು ಅಸಿಸ್ಟೆಂಟ್ ಲೀಡರ್ ಟ್ರೈನರ್ (ಸ್ಕೌಟ್ಸ್) ತರಬೇತಿಗೆ ಪಚಮರಿಗೆ ಹೋಗಿರುವುದು ಅತ್ಯಂತ ಅಭಿಮಾನದ ಸಂಗತಿ. ಇನ್ನೂ ಹೆಚ್ಚು ಹೆಚ್ಚು ಅಭ್ಯರ್ಥಿಗಳು ಅಸಿಸ್ಟೆಂಟ್ ಲೀಡರ್ ಟ್ರೈನರ್/ಲೀಡರ್ ಟ್ರೈನರ್ ತರಬೇತಿಗೆ ಹೋಗಿ ಪ್ರತಿ ಜಿಲ್ಲೆಯಲ್ಲಿಯೂ ಲೀಡರ್ ಟ್ರೈನರ್(ಸ್ಕೌಟ್ಸ್) ಮತ್ತು ಲೀಡರ್ ಟ್ರೈನರ್ (ಗೈಡ್ಸ್) ಮತ್ತು ಅಸಿಸ್ಟೆಂಟ್ ಲೀಡರ್ ಟ್ರೈನರ್ (ಸ್ಕೌಟ್ಸ್) ಮತ್ತು ಅಸಿಸ್ಟೆಂಟ್ ಲೀಡರ್ ಟ್ರೈನರ್(ಗೈಡ್ಸ್)ಗಳು ಅವಶ್ಯಕವಾಗಿ ಇರಬೇಕೆಂಬುದೇ ನಮ್ಮಗಳ ಸದಿಚ್ಛೆ. ಈ ದಿಶೆಯಲ್ಲಿ ಜಿಲ್ಲಾ ಸಂಸ್ಥೆಗಳು ಹೆಚ್ಚು ಕಾರ್ಯೋನ್ಮುಖವಾಗಬೇಕು.

ತಮ್ಮ ವಿಶ್ವಾಸಿ,

ಕೊ ಬ ಷಣ್ಮುಖಪ್ಪ

# ಪ್ರಕೃತಿ ಅಧ್ಯಯನ ಹಾಗೂ ಜೀವನ ಸೌಂದರ್ಯ

—ಎ್. ಶ್ರೀನಿವಾಸನ್, ಎ.ಎಲ್.ಟಿ. (ಎಸ್)

ಸ್ಕೌಟಿಂಗ್ ಶಿಕ್ಷಣದಲ್ಲಿ ಪ್ರಕೃತಿ ಅಧ್ಯಯನಕ್ಕೆ ಹೆಚ್ಚು ಒತ್ತು ನೀಡಲಾಗಿದೆ. ವಯಸ್ಕ ನಾಯಕರ ತರಬೇತಿಯಲ್ಲಿಯೂ ಸಹ ಇದನ್ನು ಕಡ್ಡಾಯವಾಗಿ ಅಳವಡಿಸಲಾಗಿದೆ.

ಬಿ. ಪಿ. ಯವರು ಪ್ರಕೃತಿ ಅಧ್ಯಯನವನ್ನು "ಜೀವನವನ್ನು ಸವಿಯುವುದು" ಎಂದು ಕರೆದಿದ್ದಾರೆ. ಜೀವನದ ಸೊಬಗನ್ನು ಸವಿಯಬೇಕಾದರೆ ಅದು ಪ್ರಕೃತಿಯ ಸೊಬಗನ್ನು ಸವಿಯುವುದರ ಮೂಲಕ ಮಾತ್ರವೇ ಸಾಧ್ಯ ಎನ್ನುತ್ತಾರೆ.

ನಾವು ನಮ್ಮ ಮಕ್ಕಳಿಗೆ ಕೇವಲ ಬದುಕುವ ಮಾರ್ಗ ಹೇಳಿಕೊಟ್ಟರಷ್ಟೇ ಸಾಲದು. ಬದುಕುವುದು ಹೇಗೆ ಎಂಬುದನ್ನು ಸಹ ಕಲಿಸಬೇಕು. ಬದುಕನ್ನು ಅನುಭವಿಸುವ ರೀತಿಯನ್ನು ಕಲಿಸಬೇಕು.

ಪ್ರಕೃತಿ ಅಧ್ಯಯನದಿಂದ ಬಾಲಕರ ಬುದ್ಧಿ ಮತ್ತು ಯೋಚನೆಗಳು ವಿಶಾಲವಾಗುತ್ತವೆ ಹಾಗೂ ಪ್ರಕೃತಿ ಸೌಂದರ್ಯವನ್ನು ಆಸ್ವಾದಿಸುವ ಶಕ್ತಿ ಪಡೆಯುತ್ತಾರೆ.

ಭಗವಂತನ ಅದ್ಭುತವಾದ ಈ ಸೃಷ್ಟಿಯಲ್ಲಿ ಭಗವಂತನನ್ನು ಕಾಣುವುದು ಮತ್ತು ಅವನ ಇಚ್ಛೆಯಂತೆ ಇತರರ ಸೇವೆ ಮಾಡುವುದರಲ್ಲಿ ಸಕ್ರಿಯವಾಗಿ ತೊಡಗಿಸಿಕೊಳ್ಳುವುದು ಇವೆರಡೂ ಧರ್ಮದ ಅಡಿಪಾಯವಾಗಿರುತ್ತದೆ.

ಸಂತೋಷ ಎನ್ನುವುದು ಆಂತರಿಕ ಮಾನಸಿಕ ಸ್ಥಿತಿ ಮಾತ್ರವಲ್ಲ. ಬಾಹ್ಯ ಇಂದ್ರಿಯ ಚಟುವಟಿಕೆಗಳ ಮೂಲಕವೂ ಸಂತೋಷ ದೊರೆತಾಗ ಅದರ ಸಂಪೂರ್ಣತೆಯ ಅರಿವುಂಟಾಗುತ್ತದೆ.

ಇತರರಿಗೆ ಸಹಾಯ ಮಾಡುವುದರಿಂದ ದೊರಕುವ ಸಂತೋಷವು ಬಾಹ್ಯ ಚಟುವಟಿಕೆಯಿಂದಾದರೆ, ಪ್ರಕೃತಿ ಆಸ್ವಾದನೆಯಿಂದ ದೊರಕುವ ಸಂತೋಷವು ಆಂತರಿಕ ಮಾನಸಿಕ ಸ್ಥಿತಿಯಾಗುತ್ತದೆ.

ವನ ವಿದ್ಯೆಯು ಒಮ್ಮೆ ಬಾಲಕರಿಗೆ ಕರಗತವಾಯಿತೆಂದರೆ ಅವರಲ್ಲಿ ಅವಲೋಕನ, ನೆನಪಿನ ಶಕ್ತಿ, ತೀರ್ಮಾನ ಕೈಗೊಳ್ಳುವಿಕೆ ಇವೆಲ್ಲವೂ ತಮ್ಮಷ್ಟಕ್ಕೆ ತಾವೇ ಬೆಳೆದು ಅವರ ವ್ಯಕ್ತಿತ್ವದ ಒಂದು ಭಾಗವಾಗುತ್ತವೆ.

ಎಳೆಯ ಮನಸ್ಸಿಗೆ, ಪ್ರಕೃತಿಯ ಅದ್ಭುತಗಳ ಪರಿಚಯವಾದಂತೆಲ್ಲಾ ಬಾಲಕರು ಅದರ ಸೌಂದರ್ಯವನ್ನು ಸವಿಯಲು ಕಲಿಯುತ್ತಾರೆ. ಸೌಂದರ್ಯವನ್ನು ಗುರುತಿಸಲು ಕಲಿತಾಗ ಎಂತಹುದೇ ದುಃಖದ ನೆರಳಿನಲ್ಲಿಯೂ ಸಂತೋಷದ ಕಿರಣವನ್ನು ಕಾಣಲು ಕಲಿಯುತ್ತಾರೆ.

ಬಾಲಕರಿಗೆ ಸೌಂದರ್ಯ ಪ್ರಜ್ಞೆ ಇಲ್ಲವೆಂದು ಸಾಮಾನ್ಯವಾಗಿ ಹೇಳುವ ಮಾತು. ಆದರೆ ನಿಜವಾಗಿಯೂ ಹಿರಿಯರಿಗಿಂತ ಬಾಲಕರಲ್ಲಿ ಸೌಂದರ್ಯ ಪ್ರಜ್ಞೆ ಉತ್ತಮವಾಗಿರುತ್ತದೆ ಎಂದು ಬೇಡನ್ ಪೊವೆಲ್‌ರವರು ಹೇಳುತ್ತಾರೆ.

ಪ್ರಕೃತಿಯ ಬಗ್ಗೆ ಬಾಲಕರ ಕಣ್ಣು ತೆರೆಸಬೇಕಾದ್ದು ಸ್ಕೌಟ್ ಮಾಸ್ಟರನ ಆದ್ಯ ಕರ್ತವ್ಯ.

ಆಧಾರ : "Aids to Scout Mastership"—B.P.

# ಸ್ಕೌಟಿಂಗ್‌ನ ಬಗ್ಗೆ ಸಾಮಾನ್ಯ ತಿಳುವಳಿಕೆ

—ರಾ. ಚಂದ್ರಶೇಖರನ್
ಲೇಖಕ

(ಕಳೆದ ಸಂಚಿಕೆಯಿಂದ ಮುಂದುವರೆದುದು)

## ಬೋಧೆ — ೩

**ಸಂಸ್ಥೆಯ ವಿವಿಧ ವಿಭಾಗಗಳು ಮತ್ತು ಅವುಗಳಲ್ಲಿ ಅನುಸರಿಸುವ ವಿಧಾನಗಳು**

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯಲ್ಲಿ 2 ಅಂಗಗಳಿವೆ.

1. ಬಾಲಕರಿಗಾಗಿ ಸ್ಕೌಟ್ ಅಂಗ : 2. ಬಾಲಿಕೆಯರಿಗಾಗಿ ಗೈಡ್ ಅಂಗ.

ಬಾಲಕ ಬಾಲಿಕೆಯರುಗಳಿಗೆ ನೀಡುವ ಶಿಕ್ಷಣ ಕಾರ್ಯಕ್ರಮದಲ್ಲಿ ಈ ಕೆಳಕಂಡ 4 ವಿಧಾನಗಳನ್ನು ಮುಖ್ಯವಾಗಿ ಅನುಸರಿಸಲಾಗುತ್ತದೆ.

—ಪ್ರತಿಜ್ಞೆ ಮತ್ತು ನಿಯಮ

—ಕಾಯಕದ ಮೂಲಕ ಕಲಿಕೆ

—ಸಣ್ಣ ಗುಂಪುಗಳ (ಪೆಟ್ರೋಲ್) ಸದಸ್ಯತ್ವ

—ಪ್ರಗತಿ ಪರವಾದ, ಚುರುಕಾದ ಮತ್ತು ಸ್ಪರ್ಧಾತ್ಮಕವಾದ ಕಾರ್ಯಕ್ರಮಗಳನ್ನು ಆಟಗಳು, ಉಪಯುಕ್ತ ಕೌಶಲಗಳು ಮತ್ತು ಸಮಾಜ ಸೇವೆಗಳ ಮೂಲಕ, ಪ್ರಕೃತಿ ಪರಿಸರದಲ್ಲಿ, ಅವರವರ (ಬಾಲಕರ) ಚಿತ್ತವೃತ್ತಿ, ಸಾಮರ್ಥ್ಯಗಳಿಗನುಸಾರವಾಗಿ ನೀಡಲಾಗುತ್ತದೆ.

ಪ್ರತಿ ಅಂಗದಲ್ಲಿಯೂ ಮೂರು ವಿಭಾಗಗಳಿರುತ್ತವೆ. ವಯೋಮಿತಿಗನುಗುಣವಾಗಿ ಈ ವಿಭಜನೆಯಿರುತ್ತದೆ.

| ವಯೋಮಿತಿ | ಬಾಲಕರು | ಬಾಲಿಕೆಯರು |
|---|---|---|
| 1. 6+ ರಿಂದ 10ರವರೆಗೆ | ಮರಿಗಳು | ಬುಲ್ ಬುಲ್‌ಗಳು |
| 2. 10+ ರಿಂದ 17 ರವರೆಗೆ | ಸ್ಕೌಟುಗಳು | ಗೈಡುಗಳು |
| 3. 16+ ಇಂದ 25ರವರೆಗೆ | ರೋವರ್‌ಗಳು | ರೇಂಜರ್‌ಗಳು |

ಇಷ್ಟೇ ಅಲ್ಲದೆ ಅಂಗವಿಕಲರು, ಬುದ್ಧಿಮಾಂದ್ಯ ಮುಂತಾದ ಬಾಲಕ, ಬಾಲಿಕೆಯರಿಗಾಗಿ "ವಿಸ್ತೃತ ಸ್ಕೌಟಿಂಗ್" ಇದೆ. ವಿಶೇಷತೆಯ ಈ ಹೆಸರನ್ನೂ, ಪರೀಕ್ಷಾಂಶಗಳಲ್ಲಿ ಕೆಲವಾರು ಬದಲೀ ಅಂಶಗಳನ್ನೂ ಬಿಟ್ಟರೆ, ಬಾಲಕ, ಬಾಲಿಕೆಯರೂ, ಹಿರಿಯರೂ ಈ ಮೊದಲು ಹೇಳಿದ ವಿಭಾಗಗಳಲ್ಲಿ ತದನುಸಾರವಾಗಿಯೇ ಒಂದಾಗುತ್ತಾರೆ.

ಈ ವಿಭಾಗಗಳ ಕಾರ್ಯ ಚಟುವಟಿಕೆಗಳಲ್ಲಿ ಉಪಯೋಗಿಸುವ ವಿಧಾನಗಳು ಬೇರೆ ಬೇರೆಯಾಗಿದ್ದು, ಅವರುಗಳ ವಯೋಮಿತಿ, ಮಾನಸಿಕ ಮತ್ತು ದೈಹಿಕ ಆವಶ್ಯಕತೆಗಳನ್ನನುಸರಿಸುತ್ತದೆ.

ಆ ವಿಧಾನಗಳನ್ನು ಸ್ಥೂಲವಾಗಿ ಹೀಗೆ ಹೇಳಬಹುದು.

**ಮರಿಗಳ ವಿಭಾಗ :**

| | | |
|---|---|---|
| —ಷಟ್ಕ ಪದ್ಧತಿ | : | ಮರಿಗಳನ್ನು ಆರರಂತೆ ಸಣ್ಣ ಗುಂಪುಗಳಾಗಿ ವಿಂಗಡಿಸಲಾಗುತ್ತದೆ. ಅಂತಹ ಸಣ್ಣ ಗುಂಪೇ ಷಟ್ಕ. |
| —ಕತೆ ಹೇಳುವುದು | : | ಕಿಪ್ಲಿಂಗ್‌ರವರ ಕಾಡಿನ ಕತೆಗಳು, ಈಸೋಪನ ಕತೆಗಳು, ಪಂಚತಂತ್ರ ಕತೆಗಳು, ಪೌರಾಣಿಕ ಕತೆಗಳು ಇತ್ಯಾದಿ. |
| —ನಾಟಕಾಭಿನಯ | : | ಮೇಲಿನ ಕತೆಗಳನ್ನಾಧರಿಸಿ ಸಣ್ಣ ಸಣ್ಣ ನಾಟಕಗಳು, ನೃತ್ಯಗಳು |
| —ಆಟಗಳು | : | ಆಟಗಳು ಮಕ್ಕಳ ದೈಹಿಕ ಮತ್ತು ಮಾನಸಿಕ ಬೆಳವಣಿಗೆಗಾಗಿ, ಬಹಳ ಅವಶ್ಯಕವಾದುದು. |
| —ಕಾಯಕದ ಮೂಲಕ ಕಲಿಕೆ | : | ಯೋಗ್ಯತಾ ಪದಕಗಳನ್ನೂ, ಪ್ರವೀಣತಾ ಪದಕಗಳನ್ನೂ ಸಂಪಾದಿಸಲು ಪ್ರಚೋದಿಸಲಾಗುತ್ತದೆ. |

**ಸ್ಕೌಟ್ ವಿಭಾಗ :**

| | | |
|---|---|---|
| —ಪೆಟ್ರೋಲ್ ಪದ್ಧತಿ | : | 6 ರಿಂದ 8 ಬಾಲಕರನ್ನುಳ್ಳ ಸಣ್ಣ ಸಣ್ಣ ಗುಂಪುಗಳು. ಅವರದೇ ನಾಯಕತ್ವ. ಕಲಿಕೆಗಾಗಿ, ಅವರವರಲ್ಲಿಯೇ ಸಾಧನೆ. ಸ್ಕೌಟ್ ಮಾಸ್ಟರು ಮಾರ್ಗದರ್ಶಿ ಮಾತ್ರ. |
| —ಕಾಯಕದ ಮೂಲಕ ಕಲಿಕೆ | : | ಬಾಲಕರು ಯೋಗ್ಯತಾ ಮತ್ತು ಪ್ರವೀಣತಾ ಪದಕಗಳಿಗೆ ಸಂಬಂಧಿಸಿದ ವಿಷಯಗಳನ್ನೂ, ಕೌಶಲಗಳನ್ನೂ, ಕ್ರಿಯಾಶೀಲವಾಗಿ ಕಲಿತು ಅವುಗಳನ್ನು ಸಂಪಾದಿಸುತ್ತಾರೆ. |
| —ಜವಾಬ್ದಾರಿಗಳ ಹಂಚಿಕೆ | : | ಬಾಲಕರು ತಮ್ಮ ಪೆಟ್ರೋಲುಗಳ ಹಾಗೂ ದಳದ ಗೌರವ ಪ್ರತಿಷ್ಠೆಗಳನ್ನು ಕಾಪಾಡಲು, ಜವಾಬ್ದಾರಿಗಳನ್ನು ಹಂಚಿಕೊಂಡು, ಹೊಣೆಗಾರಿಕೆಯಿಂದ ನಡೆದುಕೊಳ್ಳುತ್ತಾರೆ. |
| —ಸಮಾಜದ ಒಳಿತಿಗಾಗಿ ಕಲಿಕೆಯ ಉಪಯೋಗ | : | ತಾವು ಕಲಿತ ವಿಷಯಗಳನ್ನು, ಕೌಶಲಗಳನ್ನೂ ಸಮಾಜದ ಒಳಿತಿಗಾಗಿ ಉಪಯೋಗಿಸುತ್ತಾರೆ. |

**ರೋವರ್ ವಿಭಾಗ :**

| | | |
|---|---|---|
| —ಸ್ವಶಿಕ್ಷಣ | : | ತಮ್ಮ ತಮ್ಮ ಅಭಿರುಚಿಗಳನ್ನನುಸರಿಸಿ ವಿಷಯಗಳನ್ನು ವಿಶ್ಲೇಷಿಸಿ, ಗ್ರಹಿಸಿ, ಕೌಶಲಗಳನ್ನು ಕಲಿಯುತ್ತಾರೆ. ಪರಸ್ಪರ ಚರ್ಚಿಸಿ, ಮನನ ಮಾಡಿಕೊಳ್ಳುತ್ತಾರೆ. |
| —ಒಡನಾಟದ ಕೆಲಸ | : | ಒಬ್ಬರಿಗೊಬ್ಬರು ಹೊಂದಿಕೊಂಡು, ಜೊತೆಗೂಡಿ ಕೆಲಸಗಳನ್ನು ಮಾಡುತ್ತಾರೆ ಯಾವುದೇ ರೀತಿಯ ಭೇದ ಭಾವವಿರುವುದಿಲ್ಲ. |
| —ಸಾಮಾಜಿಕ ಶಿಕ್ಷಣ | : | ದಳದ ಎಲ್ಲರೂ ಒಟ್ಟು ಸೇರಿ, ತಾವು ಕಲಿತ ವಿಷಯಗಳ ವಿನಿಮಯ ಮಾಡಿಕೊಂಡು, ಪರಸ್ಪರ ಅರಿವು ಪಡೆದು ಶಿಕ್ಷಿತರಾಗುತ್ತಾರೆ. |

—ಜವಾಬ್ದಾರಿಗಳ ಹಂಚಿಕೆ : ಸ್ಕೌಟುಗಳಂತೆಯೇ ರೋವರ್‌ಗಳೂ ಸಹ, ಆದರೆ ಇನ್ನೂ ಹೆಚ್ಚಿನ ಮಟ್ಟದಲ್ಲಿ ಜವಾಬ್ದಾರಿಗಳನ್ನು ಹಂಚಿಕೊಂಡು ಹೊಣೆಗಾರಿಕೆಯಿಂದ ವರ್ತಿಸುತ್ತಾರೆ.

—ಸಮಾಜದ ಒಳಿತಿಗಾಗಿ ಕೌಶಲಗಳ ವಿನಿಯೋಗ : ತಾವೇ ವೃದ್ಧಿಪಡಿಸಿಕೊಂಡ ಜ್ಞಾನ ಸಂಪತ್ತು ಮತ್ತು ಕೌಶಲಗಳನ್ನು ಸಮಾಜದ ಒಳಿತಿಗೆ, ವಿಸ್ತೃತ ರೀತಿಯಲ್ಲಿ ಒದಗಿಬರುವಂತೆ, ತಾವೇ ಯೋಜನೆಯನ್ನು ತಯಾರಿಸಿ, ಕಾರ್ಯಗತ ಮಾಡುತ್ತಾರೆ.

## ಬೋಧೆ — ೪

**ವಿಷಯ : ಬಾಲಕನು ಪಡೆಯುವ ಪ್ರವರ್ಧಮಾನ ಯೋಜನೆಯ ಬಗ್ಗೆ ತಿಳಿದಿರಬೇಕು.**

ಬಾಲಕರಿಗೆ ಶಿಕ್ಷಣ ನೀಡುವುದಕ್ಕಾಗಿ ಸ್ಕೌಟ್ ಸಂಸ್ಥೆಯಲ್ಲಿ ಬಳಸುವ ವಿಶಿಷ್ಟ ರೀತಿಯ ವಿಧಾನಗಳನ್ನು ಈ ಮುಂಚೆ ತಿಳಿಸಲಾಯಿತು. ಆ ವಿಧಾನಗಳಲ್ಲಿ " ಸ್ಫೂರ್ತಿದಾಯಕವಾದ, ಪ್ರಗತಿಪರವಾದ ಕಾರ್ಯಕ್ರಮ " ಗಳನ್ನು ಸ್ಕೌಟಿಂಗ್‌ನಲ್ಲಿ ಅಳವಡಿಸಿಕೊಂಡು, ಬಾಲಕರು ಪ್ರವರ್ಧಮಾನರಾಗಲು ಸಹಾಯ ಮಾಡುವ ಯೋಜನೆಯೂ ಒಂದು. ಈ ಕಾರ್ಯ ಕ್ರಮಗಳು ಬಾಲಕರಿಗೆ ಸ್ಫೂರ್ತಿಯನ್ನು ನೀಡಿ, ಹಂತ ಹಂತವಾಗಿ ವಿಷಯಗಳನ್ನು ತಿಳಿದುಕೊಳ್ಳಲೂ, ಕೌಶಲ್ಯಗಳನ್ನು ಅಭ್ಯಾಸಮಾಡಲೂ, ಇತರರೊಡನೆ ಹೊಂದಿಕೊಂಡು ಕೆಲಸ ಮಾಡಲೂ, ವಿಫುಲವಾದ ಅವಕಾಶಗಳನ್ನು ಒದಗಿಸುತ್ತದೆ, ಬಾಲಕರು ಪ್ರವರ್ಧಮಾನರಾಗಲು ಕಾರಣವಾಗುತ್ತದೆ.

ಈ ಯೋಜನೆಯಲ್ಲಿ ಮಕ್ಕಳಲ್ಲಿ ನಾವು ಆಶಿಸುವ, ವಯಸ್ಕರಾದಾಗ ಅವರಿಗೆ ಜೀವನದಲ್ಲಿ ಉಪಯೋಗವಾಗುವ 14 ಆದರ್ಶಗಳನ್ನು ಜೋಡಿಸಲಾಗಿದೆ. ಮರಿಗಳು ಹಿರಿಯರನ್ನು ಅನುಕರಿಸುವುದರ ಮೂಲಕ, ಸ್ಕೌಟುಗಳು ಹಿರಿಯರ ಮಾರ್ಗದರ್ಶನದಲ್ಲಿ ಅನುಷ್ಠಾನಕ್ಕೆ ತರುವುದರ ಮೂಲಕ, ರೋವರ್‌ಗಳು ಪರೋಕ್ಷವಾಗಿ ಹಿರಿಯರ ಸಹಾಯ ಪಡೆದು ತಾವೇ ಯೋಜನೆಯನ್ನು ತಯಾರಿಸಿ, ಕಾರ್ಯಗತ ಮಾಡುವುದರ ಮೂಲಕ, ಈ ಆದರ್ಶಗಳನ್ನು ಕ್ರಿಯಾತ್ಮಕವಾಗಿ ಕಲಿಯುತ್ತಾರೆ.

ಬಾಲಕರ ವಯಸ್ಸಿಗನುಗುಣವಾಗಿ, ಅವರ ಬೌದ್ಧಿಕ ಹಾಗೂ ದೈಹಿಕ ಬೆಳವಣಿಗೆಗೆ ಬೇಕಾದ ಅವಶ್ಯಕತೆಗಳನ್ನನು ಸರಿಸಿ, ಸಾಮಾಜಿಕ ಮತ್ತು ಆಧ್ಯಾತ್ಮಿಕ ಅಂಶಗಳನ್ನಳವಡಿಸಿ ಈ ಯೋಜನೆಯನ್ನು ತಯಾರಿಸಲಾಗಿದೆ. ಮನೆ ಹಾಗೂ ಶಾಲೆಗಳಲ್ಲಿ ದೊರಕದಿರುವ ಅನೇಕ ಸವಾಲುಗಳನ್ನೊದಗಿಸುವುದರಿಂದ, ಇದು ಬಾಲಕರಿಗೆ ಆಕರ್ಷಕವಾಗಿರುತ್ತದೆ. ಈ ರೀತಿಯಲ್ಲಿ ಸಾಕಷ್ಟು ಸವಾಲುಗಳನ್ನೆದುರಿಸುವುದರಿಂದ, ಸಾಧನೆ ಮಾಡಿದ ತೃಪ್ತಿಯೂ, ಕಲಿತುಕೊಳ್ಳಲು ಅವಕಾಶವೂ ಸಿಗುತ್ತದೆ. ತಮಗೆ ಇಷ್ಟವಾದ ಕಾರ್ಯಕ್ರಮಗಳನ್ನು ಆರಿಸಿಕೊಂಡು, ತಾವಾಗಿ ಪರಿಶೋಧಿಸಿ ಕಂಡು ಕೊಂಡ ಅನುಭವವನ್ನು ಪಡೆಯಲೂ, ಸಾಹಸಪಟ್ಟು ಸಾಧಿಸಿ, ಆನಂದಪಡಲೂ ಅನುವಾಗುತ್ತದೆ. ಕ್ರಿಯಾತ್ಮಕವಾಗಿ ಭಾಗವಹಿಸಿ ತಿಳುವಳಿಕೆ ನೀಡುವ, ಸ್ಕೌಟಿಂಗ್‌ನ ಹೊರಾಂಗಣ ಮತ್ತು ಒಳಾಂಗಣ ಚಟುವಟಿಕೆಗಳು, ಬಾಲಕರ ಸರ್ವಾಂಗೀಣ ಬೆಳವಣಿಗೆಗೆ ಸಹಾಯವಾಗುತ್ತದೆ. ಮುಖ್ಯವಾಗಿ ಅವರ ನಡತೆ ಮತ್ತು ಉತ್ತಮ ಪೌರತ್ವಕ್ಕೆ ಶಿಕ್ಷಣ ನೀಡುತ್ತದೆ.

ವಿವಿಧ ಪದಕಗಳ ಹಂತಗಳನ್ನು, ಬಾಲಕರ ಶಾಲಾ ಶಿಕ್ಷಣದ ಸ್ತರಗಳ ಅವಧಿಗನುಗುಣವಾಗಿ ಅಳವಡಿಸಿ, ಯೋಜಿಸಲಾಗಿದೆ.

6ನೆಯ ವಯಸ್ಸಿನಿಂದ 24 ವರ್ಷಗಳು ಕಳೆಯುವವರೆಗೆ ಯುವ ಮಾನವರು ಕಲಿಕೆಯ ಕ್ಷೇತ್ರದಲ್ಲಿದ್ದು 25 ರಿಂದ ಮುಂದೆ ಸ್ಕೌಟರ್‌ಗಳಾಗಿಯೋ, ಇತರ ಜವಾಬ್ದಾರಿಯುತ ಸ್ಥಾನಗಳನ್ನಲಂಕರಿಸಿಯೋ, ಸೇವಾ ಕ್ಷೇತ್ರಕ್ಕೆ ಕಾಲಿಡುತ್ತಾರೆ.

ಈ ಯೋಜನೆಗೆ ಸಂಬಂಧಪಟ್ಟ ಎಲ್ಲಾ ವಿವರಗಳು ಎಂದರೆ ವಿವಿಧ ಹಂತಗಳು ಆಯಾ ಹಂತಗಳಲ್ಲಿ ತಿಳಿಯಬೇಕಾದ ವಿಷಯಗಳು ಮತ್ತು ಕಲಿಯಬೇಕಾದ ಕೌಶಲ್ಯಗಳು ಪ್ರತಿ ಹಂತದಲ್ಲಿ ಸಂಪಾದಿಸಬಹುದಾದ ಪ್ರವೀಣತಾ ಪದಕಗಳು, ಹಂತದಿಂದ ಹಂತಕ್ಕೆ ಇರುವ ಮಧ್ಯಮ ಕಾಲಾವಧಿ, ಇವೇ ಮುಂತಾದ ವಿವರಗಳನ್ನು ಎ.ಪಿ.ಆರ್.ಒ. ಭಾಗ IIರಲ್ಲಿ ಕೊಡಲಾಗಿದೆ.

**ಮರಿಗಳ ವಿಭಾಗ :** ಬಾಲಕನು ಉಮೇದುವಾರನಾಗಿ 6+ವಯಸ್ಸಿಗೆ ಹಿಂಡಿಗೆ ಸೇರುತ್ತಾನೆ. ನಿಗದಿತ ಅಂಶಗಳ ಬಗ್ಗೆ ಶಿಕ್ಷಣ ಪಡೆದು "ಪ್ರವೇಶ್ ಮರಿ" ಯಾಗುತ್ತಾನೆ.

ಪ್ರವೇಶ್ ಮರಿಯು ಕನಿಷ್ಠ ಒಂದು ತಿಂಗಳು ಸೇವೆ ಸಲ್ಲಿಸಿ ಪ್ರಥಮ ಚರಣ್‌ಗೆ ಅರ್ಹನಾಗುತ್ತಾನೆ. ಪ್ರಥಮ ಚರಣ್ ಮರಿಯು 2 ಪ್ರ. ಪದಕಗಳನ್ನು ಸಂಪಾದಿಸಬಹುದು.

ಪ್ರ. ಚರಣ್ ಮರಿಯು ಕನಿಷ್ಠ ಮೂರು ತಿಂಗಳುಗಳ ಸೇವೆ ಸಲ್ಲಿಸಿ ದ್ವಿತೀಯ ಚರಣ್‌ಗೆ ಅರ್ಹನಾಗುತ್ತಾನೆ. ದ್ವಿತೀಯ ಚರಣ್ ಮರಿಯು 2+2 ಪ್ರ. ಪದಕಗಳನ್ನು ಸಂಪಾದಿಸಬಹುದು.

ದ್ವಿಚರಣ್ ಮರಿಯು ಕನಿಷ್ಠ ಆರು ತಿಂಗಳು ಸೇವೆ ಸಲ್ಲಿಸಿ ತೃತೀಯ ಚರಣ್‌ಗೆ ಅರ್ಹನಾಗುತ್ತಾನೆ. ತೃತೀಯ ಚರಣ್ ಮರಿಯು ಎಲ್ಲಾ ಪ್ರ. ಪದಕಗಳನ್ನು ಸಂಪಾದಿಸಬಹುದು.

ತೃತೀಯ ಚರಣ್ ಮರಿಯು ಕನಿಷ್ಠ ಒಂಬತ್ತು ತಿಂಗಳು ಸೇವೆ ಸಲ್ಲಿಸಿ ಚತುರ್ಥ ಚರಣ್‌ಗೆ ಅರ್ಹನಾಗುತ್ತಾನೆ.

**ಸ್ಕೌಟ್ ವಿಭಾಗ :** ಬಾಲಕನು ಉಮೇದುವಾರನಾಗಿ 10+ ವಯಸ್ಸಿಗೆ ದಳಕ್ಕೆ ಸೇರಬಹುದು. ಒಂದು ತಿಂಗಳ ಕಾಲ ಶಿಕ್ಷಣ ಪಡೆದು "ಪ್ರವೇಶ್ ಸ್ಕೌಟ್" ಆಗಬಹುದು. ಪ್ರವೇಶ್ ಸ್ಕೌಟ್ ಕನಿಷ್ಠ ಆರು ತಿಂಗಳುಕಾಲ ಸೇವೆ ಸಲ್ಲಿಸಿ ಪ್ರಥಮ ಸೋಪಾನ್ ಪದಕಕ್ಕೆ ಅರ್ಹನಾಗುತ್ತಾನೆ. ಪ್ರ. ಸೋಪಾನ್ ಸ್ಕೌಟು ಕನಿಷ್ಠ 9 ತಿಂಗಳುಕಾಲ ಸೇವೆಸಲ್ಲಿಸಿ ದ್ವಿತಿಯ ಸೋಪಾನ್ ಪದಕಕ್ಕೆ ಅರ್ಹನಾಗುತ್ತಾನೆ. ದ್ವಿ. ಸೋಪಾನ್ ಸ್ಕೌಟು ಕನಿಷ್ಠ ಒಂದು ವರ್ಷ ಕಾಲ ಸೇವೆ ಸಲ್ಲಿಸಿ ತೃತೀಯ ಸೋಪಾನ್ ಪದಕಕ್ಕೆ ಅರ್ಹನಾಗುತ್ತಾನೆ. ತೃ. ಸೋಪಾನ್ ಸ್ಕೌಟು ಕನಿಷ್ಠ ಆರು ತಿಂಗಳು ಕಾಲ ಸೇವೆ ಸಲ್ಲಿಸಿ ರಾಜ್ಯ ಪುರಸ್ಕಾರ್ ಪದಕಕ್ಕೆ ಅರ್ಹನಾಗುತ್ತಾನೆ. ರಾಜ್ಯ ಪುರಸ್ಕಾರ್ ಸ್ಕೌಟು ಕನಿಷ್ಠ ಒಂದು ವರ್ಷ ಕಾಲ ಸೇವೆ ಸಲ್ಲಿಸಿ ರಾಷ್ಟ್ರಪತಿ ಪ್ರಶಸ್ತಿ ಪದಕಕ್ಕೆ ಅರ್ಹನಾಗುತ್ತಾನೆ.

ಸ್ಕೌಟ್‌ಗೆ ರಾಜ್ಯ ಪುರಸ್ಕಾರ್ ಪಡೆಯಲು 13+ ವಯಸ್ಸೂ, ರಾಷ್ಟ್ರಪತಿ ಪ್ರಶಸ್ತಿ ಪಡೆಯಲು 14+ ವಯಸ್ಸು ಆಗಿರಬೇಕು.

**ರೋವರ್ ವಿಭಾಗ :** ಯುವಕನು ಉಮೇದುವಾರನಾಗಿ 16+ ವಯಸ್ಸಿಗೆ ದಳಕ್ಕೆ (ಕ್ರೂ) ಸೇರುತ್ತಾನೆ. ವಿಶೇಷ ಸಂದರ್ಭಗಳಲ್ಲಿ 15+ ಗೂ ಸೇರಬಹುದು. ಕ್ರೂ ಕೌನ್ಸಿಲ್‌ನಲ್ಲಿ ನಿಗದಿಪಡಿಸಿದಷ್ಟು ಕಾಲ ಶಿಕ್ಷಣ ಪಡೆದು ಪ್ರವೇಶ್ ರೋವರ್ ಆಗುತ್ತಾನೆ.

ಪ್ರವೇಶ್ ರೋವರ್ ಒಂದು ವರ್ಷ ಕಾಲ ಸೇವೆ ಸಲ್ಲಿಸಿ ಪ್ರವೀಣ್ ಪದಕಕ್ಕೆ ಅರ್ಹನಾಗುತ್ತಾನೆ.

ಪ್ರವೀಣ್ ರೋವರ್ ಒಂದು ವರ್ಷ ಕಾಲ ಸೇವೆ ಸಲ್ಲಿಸಿ ನಿಪುಣ್ ಪದಕಕ್ಕೆ ಅರ್ಹನಾಗುತ್ತಾನೆ.

ನಿಪುಣ್ ರೋವರ್ ಒಂದು ವರ್ಷಕಾಲ ಸೇವೆ ಸಲ್ಲಿಸಿ ರಾಷ್ಟ್ರಪತಿ ರೋವರ್ ಪ್ರಶಸ್ತಿ ಪದಕಕ್ಕೆ ಅರ್ಹನಾಗುತ್ತಾನೆ.

**ಪ್ರವೀಣತಾ ಪದಕಗಳು :** ಮರಿಗಳ ವಿಭಾಗದಲ್ಲಿ 15 ಪ್ರವೀಣತಾ ಪದಕಗಳೂ ; ಸ್ಕೌಟ್ ವಿಭಾಗದಲ್ಲಿ 92 ಪ್ರವೀಣತಾ ಪದಕಗಳೂ ; ರೋವರ್ ವಿಭಾಗದಲ್ಲಿ 11 ಪ್ರವೀಣತಾ ಪದಕಗಳೂ ಇದೆ.

ಅವಶ್ಯಕತೆಯನ್ನನುಸರಿಸಿ ತಿಳಿಯಬಹುದಾದ ಹೆಚ್ಚು ವಿವರಗಳನ್ನು ಎ.ಪಿ.ಆರ್.ಒ. ಭಾಗ 2ರಲ್ಲಿ ನೋಡಿ ತಿಳಿದುಕೊಳ್ಳಬಹುದು.

# ಹಿಮಾಲಯ ವುಡ್ ಬ್ಯಾಡ್ಜ್ ಹೋಲ್ಡರ್ಸ್ ಮೀಟ್

**15 ರಿಂದ 17 ಸೆಪ್ಟೆಂಬರ್ 1995 ಧಾರವಾಡ**

---

—ಸಿ. ಎಸ್. ರೆಡ್ಡಿ
ಸಂಯೋಜಕರು

48ನೇ ಹಿಮಾಲಯ ವುಡ್ ಬ್ಯಾಡ್ಜ್ ಹೋಲ್ಡರ್ಸ್ ಸಮಾವೇಶವು ಧಾರವಾಡದ ಸ್ಕೌಟ್ ಗೈಡ್ ಭವನದಲ್ಲಿ 15 ರಿಂದ 17ನೆಯ ಸೆಪ್ಟೆಂಬರ್ 1995ರ ವರೆಗೆ ನಡೆಯಿತು. ಜಿಲ್ಲಾ ಸಂಸ್ಥೆಯವರು 2 ದಿನಗಳ ಮೊದಲೇ ತಂಗಲು ವ್ಯವಸ್ಥೆ, ಶಾಮಿಯಾನ ಮುಂತಾದ ಎಲ್ಲಾ ವ್ಯವಸ್ಥೆಗಳನ್ನು ಮಾಡಿ ನಮ್ಮನ್ನು ಸ್ವಾಗತಿಸಲು ಸಿದ್ಧರಿದ್ದರು. ದಿನಾಂಕ 15-9-1995ರ ಬೆಳಿಗ್ಗೆ 8 ಗಂಟೆಯ ಒಳಗಾಗಿ ರಾಜ್ಯದ 22 ಜಿಲ್ಲೆಗಳಿಂದ ಒಟ್ಟು 191 ಮಂದಿ ಸ್ಕೌಟರ್ ಮತ್ತು ಗೈಡರುಗಳು ಆಗಮಿಸಿದ್ದರು. (163ಎಸ್+28ಜಿ)

ಸ್ಕೌಟರ್‌ಗಳು ಅಕ್ಕನ ಬಳಗದಲ್ಲಿಯೂ, ಗೈಡರ್‌ಗಳು ಸ್ಕೌಟ್ ಗೈಡ್ ಭವನದಲ್ಲಿಯೂ ತಂಗಲು ವ್ಯವಸ್ಥೆ ಮಾಡಲಾಗಿದ್ದಿತು. 10-00 ಗಂಟೆಗೆ ಸರಿಯಾಗಿ ಧ್ವಜಾರೋಹಣವಾಯಿತು. ನಂತರ ಸಮಾವೇಶದ ಉದ್ದೇಶಗಳು, ವಿಶ್ವ ವಯಸ್ಕರ ನಿರ್ವಹಣಾ ನೀತಿ, ಮನೋವೃತ್ತಿ ಮತ್ತು ಸಾಮರ್ಥ್ಯ, ತರಬೇತಿ ಅಧ್ಯಯನ ಮತ್ತು ಸಂಧಾನದ ಬಗ್ಗೆ ಶ್ರೀಮತಿ ಪಿ ಸರೋಜ, ಶ್ರೀ ಕೆ. ತಿಮ್ಮಪ್ಪ, ಶ್ರೀ ಎಸ್. ಪಾಲ್‌ರಾಜ್, ಶ್ರೀ ನಾರಾಯಣಶೆಟ್ಟಿ, ಮತ್ತು ಶ್ರೀಮತಿ ಕಮಲಾಕ್ಷಮ್ಮನವರು ವಿವರಿಸಿದರು.

ಮಧ್ಯಾಹ್ನ ಶ್ರೀ ಎಮ್. ವೆಂಕಟಕೃಷ್ಣಪ್ಪ ಮತ್ತು ಶ್ರೀ ಹೆಚ್. ರಾಮರಾವ್‌ರವರು ಮೊದಲನೆಯ ಗಿಲ್‌ವೆಲ್ ರೀ-ಯೂನಿಯನ್ ಬಗ್ಗೆ ವಿವರಿಸಿದರು. ಹೊಸ ಆಟಗಳು ಮತ್ತು ಕೂಗಾಟಗಳ ಬಗ್ಗೆ ಗುಂಪುಗಳಲ್ಲಿ ಚರ್ಚಿಸಿ ಸ್ಕೌಟರ್ಸ್ ಮತ್ತು ಗೈಡರ್ಸ್ ಉತ್ತಮ ಪ್ರದರ್ಶನ ನೀಡಿದರು. ಸಂಜೆ 4 ಗಂಟೆಗೆ ಧಾರವಾಡ ಜಿಲ್ಲಾ ಪಂಚಾಯಿತಿ ಅಧ್ಯಕ್ಷರಾದ ಶ್ರೀ ವಿ. ಎಸ್. ಪಾಟೀಲರವರ ಅಧ್ಯಕ್ಷತೆಯಲ್ಲಿ ಪ್ರಾರಂಭೋತ್ಸವವನ್ನು ಏರ್ಪಡಿಸಲಾಗಿತ್ತು. ಹೆಸರಾಂತ ಸಾಹಿತಿಗಳಾದ ಶ್ರೀ ಎನ್. ಕೆ. ಕುಲಕರ್ಣಿಯವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಅದೇ ದಿನ ಸಂಜೆ ಸ್ಥಳೀಯ ಶಾಲಾ ಮಕ್ಕಳಿಂದ ಮತ್ತು ಸ್ಕೌಟ್ ಗೈಡ್‌ಗಳಿಂದ ಪ್ರತಿಭಾ ಪ್ರದರ್ಶನವು ಆಕರ್ಷಣೀಯವಾಗಿ ನಡೆದು ಎಲ್ಲರನ್ನೂ ಮನತಣಿಸಿತು.

ದಿನಾಂಕ 16-9-1995 ರಂದು ಬೆಳಿಗ್ಗೆ ಉಪಹಾರದ ನಂತರ ಧಾರವಾಡ ಜಿಲ್ಲೆಯ ಸಸ್ಯಚೇತನ ಸ್ಕೌಟ್ ಗೈಡ್ ಶಿಕ್ಷಣ ಶಿಬಿರ, ಗರಗದ ಮಡಿವಾಳೇಶ್ವರ, ಬೈಲಹೊಂಗಲದಲ್ಲಿರುವ ವೀರರಾಣಿ ಕಿತ್ತೂರು ಚೆನ್ನಮ್ಮನವರ ಸಮಾಧಿ, ಶ್ರೀ ಸೋಗಲ ಕ್ಷೇತ್ರ, ಶ್ರೀ ಸೋಮೇಶ್ವರ ದೇವಾಲಯ, ಮುನವಳ್ಳಿಯ ಶ್ರೀ ಪಂಚಲಿಂಗೇಶ್ವರ ದೇವಾಲಯ ಮತ್ತು ಇಂದಿರಾಗಾಂಧಿ (ಮಲಪ್ರಭಾ) ಅಣೆಕಟ್ಟನ್ನು (ನವಿಲು ತೀರ್ಥ) ವೀಕ್ಷಿಸಿ, ಎಲ್ಲಮ್ಮನ ಗುಡ್ಡದ ಶ್ರೀ ರೇಣುಕಾ ದೇವಾಲಯ ಶ್ರೀ ಮುರುಘಾ ಮಠ ಇವುಗಳನ್ನು ಸಂದರ್ಶಿಸಲಾಯಿತು. ರಾತ್ರಿ ಹಿಮಾಲಯ ವುಡ್‌ಬ್ಯಾಡ್ಜ್ ಹೋಲ್ಡರ್‌ಗಳು ಜಿಲ್ಲಾವಾರು ಶಿಬಿರಾಗ್ನಿಯನ್ನು ಅತ್ಯುತ್ತಮವಾಗಿ ನಡೆಸಿಕೊಟ್ಟರು.

ದಿನಾಂಕ 17-9-1995 ರಂದು ಬೆಳಿಗ್ಗೆ 7–30 ಗಂಟೆಗೆ ಶ್ರೀ ರಾಮಕೃಷ್ಣ ಮಠದ ಶ್ರೀ ಸ್ವಾಮಿ ವಿಜಯಾನಂದ ಸರಸ್ವತಿ ಅವರ ಆಶೀರ್ವಚನದೊಂದಿಗೆ ಸರ್ವಧರ್ಮ ಸಮನ್ವಯ ಪ್ರಾರ್ಥನೆಯನ್ನು ಆಚರಿಸಲಾಯಿತು. ಸ್ಕೌಟ್ಸ್ ಮತ್ತು ವ್ಯಾಯಾಮ ಹಾಗೂ ಕ್ವಿಜ್, ಕೂಡುಬುದ್ಧಿ, ಸಂಪರ್ಕ ಸಾಧನೆಗಳು ಈ ವಿಷಯಗಳ ಬಗ್ಗೆ ಶ್ರೀ ಮಹಮದ್ ವಾಜಿಲ್, ಶ್ರೀ ಆರ್. ಚಂದ್ರಶೇಖರನ್ ಮತ್ತು ಶ್ರೀ ಎಸ್. ಶ್ರೀನಿವಾಸನ್‌ರವರು ಮಾತನಾಡಿದರು. ಧಾರವಾಡದ ಮಾಜಿ ಸ್ಕೌಟ್ ಆಯುಕ್ತ ಶ್ರೀ ದೇಶಪಾಂಡೆ ಮತ್ತು ಡಾ॥ ಉಷಾಮೂರ್ತಿಯವರು ನಮ್ಮ ಸಂಸ್ಕೃತಿ ಮತ್ತು ಪರಂಪರೆಯನ್ನು ಉಳಿಸುವಲ್ಲಿ ಸ್ಕೌಟುಗಳು ಮತ್ತು ಗೈಡುಗಳ ಪಾತ್ರದ ಬಗ್ಗೆಯೂ ಶ್ರೀ ಎಸ್. ವಿ. ಮೊರಬ ಮತ್ತು ಶ್ರೀ ಎಸ್. ವಿ. ಕುಲಕರ್ಣಿಯವರು ಜನಸಂಖ್ಯೆ ಶಿಕ್ಷಣದ ಬಗ್ಗೆಯೂ, ಮತ್ತು ಡಾ॥ ದಿಲ್‌ಷಾದ್‌ರವರು ಸಾಕ್ಷರತಾ ಆಂದೋಲನದ ಬಗ್ಗೆಯೂ ಮನಮುಟ್ಟುವಂತೆ, ಹಾಡಿನ ರೂಪದಲ್ಲಿ ಉದಾಹರಣೆಗಳೊಂದಿಗೆ ಅಮೋಘ ಭಾಷಣ ಮಾಡಿ ಎಲ್ಲರ ಮನಸ್ಸನ್ನೂ ಸೂರೆಗೊಂಡರು. ರಾಷ್ಟ್ರೀಯ ಕಛೇರಿ ನವದೆಹಲಿಯ ಜಂಟಿ ನಿರ್ದೇಶಕರಾದ ಶ್ರೀ ಮನ್‌ಚಂದ ಮತ್ತು ರಾಷ್ಟ್ರೀಯ ತರಬೇತಿ ಶಿಬಿರದ ಅಧಿಕಾರಿಗಳಾದ ಶ್ರೀ ಎಲ್. ಎನ್. ಸುತಾರ್‌ರವರು ಆಗಮಿಸಿ ಉತ್ತಮ ಸಲಹೆ ಸೂಚನೆಗಳನ್ನು ನೀಡಿದರು. 4-30 ಗಂಟೆಗೆ ಹಿಮಾಲಯ ವುಡ್ ಬ್ಯಾಡ್ಜ್ ಹೋಲ್ಡರ್ಸ್‌ಗಳ ವ್ಯವಹಾರ ಸಭೆ ನಡೆಯಿತು. ಅನೇಕ ರಚನಾತ್ಮಕ ವಿಷಯಗಳ ಬಗ್ಗೆ ಚರ್ಚಿಸಲಾಯಿತು. ಸಂಜೆ 5-30 ಗಂಟೆಗೆ ಧಾರವಾಡದ ಜಿಲ್ಲಾಧಿಕಾರಿಗಳಾದ ಶ್ರೀ ಯೋಗೇಂದ್ರ ತ್ರಿಪಾಠಿಯವರ ಅಧ್ಯಕ್ಷತೆಯಲ್ಲಿ ಸಮಾರೋಪ ಕಾರ್ಯಕ್ರಮ ನಡೆಯಿತು. ಮುಖ್ಯ ಅತಿಥಿಗಳಾಗಿ ಕರ್ನಾಟಕ ರಾಜ್ಯ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಪ್ರಧಾನ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ, ರಾಜ್ಯ ಕಾರ್ಯದರ್ಶಿಗಳಾದ ಶ್ರೀ ಎಂ. ಸೂರ್ಯನಾರಾಯಣಪ್ಪ ಮತ್ತು ರಾಜ್ಯ ಸಹಕಾರ್ಯದರ್ಶಿಗಳಾದ ಶ್ರೀ ಎಮ್. ಮಲ್ಲಿಕಾರ್ಜುನಯ್ಯ ಮತ್ತು ಮೇಜರ್ ಟಿ. ಕೆ. ನಾಗಂಬಾಳ್ ಇವರುಗಳು ಆಗಮಿಸಿದ್ದರು. ಸಮಾರೋಪ ಸಮಾರಂಭದಲ್ಲಿ ಹಿರಿಯ ಸ್ಕೌಟರ್‌ಗಳಾದ ಶ್ರೀ ಎಮ್. ವೆಂಕಟಕೃಷ್ಣಪ್ಪ ಶ್ರೀ ಎಚ್. ರಾಮರಾವ್, ಶ್ರೀ ಎಸ್. ಪಾಲ್‌ರಾಜ್, ಶ್ರೀ ಆರ್. ಚಂದ್ರಶೇಖರ್‌ರವರನ್ನು ಜಿಲ್ಲಾ ಸಂಸ್ಥೆಯವರು ಸನ್ಮಾನಿಸಿದರು. ಸಮಾವೇಶದ ಪರವಾಗಿ ಧಾರವಾಡ ಜಿಲ್ಲಾ ಕೋಶಾಧಿಕಾರಿಯಾದ ಶ್ರೀ ಎಮ್. ಎಮ್. ಲೊಂಡೆಯವರನ್ನೂ ಮತ್ತು ಶ್ರೀಮತಿ ಪ್ರಭಾ ಲೊಂಡೆಯವರನ್ನೂ ರಾಜ್ಯ ಪ್ರಧಾನ ಆಯುಕ್ತರು ಸನ್ಮಾನಿಸಿದರು. ರಾಜ್ಯ ಪ್ರಧಾನ ಆಯುಕ್ತರು, ಕಾರ್ಯದರ್ಶಿಗಳು ಸಹಕಾರ್ಯದರ್ಶಿಗಳು ಮತ್ತು ಜಿಲ್ಲಾಧಿಕಾರಿಗಳನ್ನು ಧಾರವಾಡ ಜಿಲ್ಲಾ ಸಂಸ್ಥೆಯವರು ಶಾಲು ಹೊದಿಸಿ ಸನ್ಮಾನಿಸಿದರು. ಎಲ್ಲಾ ಸ್ಕೌಟರ್ ಗೈಡರ್‌ಗಳಿಗೂ ನೆನಪಿನ ಕಾಣಿಕೆ ಮತ್ತು ಪ್ರಮಾಣ ಪತ್ರಗಳನ್ನು ನೀಡಲಾಯಿತು.

ಧಾರವಾಡ ಜಿಲ್ಲಾ ಸಂಸ್ಥೆಯು ಸಮಾವೇಶದ ಅತಿಥೇಯ ಜಿಲ್ಲೆಯಾಗಿ ಎಲ್ಲ ರೀತಿಯಲ್ಲಿಯೂ ಸಹಾಯ ಸಹಕಾರ ನೀಡಿ ಅತ್ಯುತ್ತಮ ಊಟವನ್ನು ನೀಡಿ ನಮ್ಮೆಲ್ಲರ ಮನಸ್ಸನ್ನು ಸೂರೆಗೊಂಡಿದ್ದಾರೆ. ಶ್ರೀಯುತ ಎಮ್. ಎಮ್. ಲೋಂಡೆ, ಶ್ರೀಮತಿ ಪ್ರಭಾ ಲೋಂಡೆ, ಶ್ರೀಮತಿ ಪ್ರೇಮಾ ಮಂಗಳೂರು, ಶ್ರೀ ದೊಡ್ಡಮನೆಯವರು, ಶ್ರೀ ಭಿಲ್ಲೆಯವರು, ಕಾರ್ಯಕಾರಿ ಸಮಿತಿಯವರು, ಸ್ಕೌಟರ್ ಗೈಡರ್‌ಗಳು ಹಾಗೂ ಸಮಾವೇಶವು ಯಶಸ್ವಿಯಾಗಿ ನಡೆಯಲು ಸಹಕರಿಸಿದ ನಮ್ಮ ರಾಜ್ಯ ಪ್ರಧಾನ ಕಛೇರಿ ರಾಜ್ಯ ಸಂಘಟನಾ ಆಯುಕ್ತರುಗಳು, ರಾಜ್ಯ ತರಬೇತಿ ಆಯುಕ್ತರುಗಳು, ಸಹಾಯಕ ಸಂಘಟನಾ ಆಯುಕ್ತರುಗಳು, ಹಿರಿಯ ಸ್ಕೌಟರ್ ಮತ್ತು ಗೈಡರ್‌ಗಳು ಅಭಿನಂದನೀಯರು. ರಾಜ್ಯ ಪ್ರಧಾನ ಆಯುಕ್ತರು ಶ್ರೀ ದೊಡ್ಡಮನೆ, ಶ್ರೀ ಭಿಲ್ಲೆ ಮತ್ತು ಶ್ರೀ ಯೋಗೇಂದ್ರ ತ್ರಿಪಾಠಿಯವರಿಗೆ ಕೃತಜ್ಞತಾ ಪದಕವನ್ನು ನೀಡಿ ಗೌರವಿಸಿದರು.

ಎಲ್ಲ ರೀತಿಯ ಸಹಾಯ, ಸಹಕಾರ, ಪ್ರೋತ್ಸಾಹ ನೀಡಿ ಸಹಕರಿಸಿದ ರಾಜ್ಯ ಪ್ರಧಾನ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪನವರು ಮತ್ತು ಕಾರ್ಯಕಾರಿ ಸಮಿತಿಯವರುಗಳು ವಿಶೇಷವಾಗಿ ಉಲ್ಲೇಖನೀಯರು.

# 77ನೇ ರಾಜ್ಯ ಪರಿಷತ್ತಿನ ಮಹಾಸಭೆ

77ನೇ ರಾಜ್ಯ ಪರಿಷತ್ತಿನ ಮಹಾಸಭೆ ಈ ಬಾರಿ ರಾಯಚೂರು ಜಿಲ್ಲಾ ವಿಭಾಗ ಅತಿಥೇಯ ಜಿಲ್ಲೆಯು ಸೌಜನ್ಯದಿಂದ ತಾ|| 27-08-1995ರಂದು ಎ.ಪಿ.ಎಂ.ಸಿ. ಯಾರ್ಡ್ ಬಳಿಯ ಗಂಜ್ ನಿವೇಶನದಲ್ಲಿರುವ ಗಂಜ್ ಕಲ್ಯಾಣ ಮಂಟಪದಲ್ಲಿ ಜರುಗಿತು.

90ಕ್ಕೂ ಮಿಕ್ಕಿ ಹಾಜರಿದ್ದ ಈ ಸಭೆಯ ಪೂರ್ವಭಾವಿ ಸಭೆಯಲ್ಲಿ ಬೃಹತ್ ನೀರಾವರಿ ರಾಜ್ಯ ಸಚಿವರಾದ ಶ್ರೀ ಮುನಿಯಪ್ಪ ಅವರೂ, ರಾಯಚೂರು ಜಿಲ್ಲಾ ಪರಿಷತ್ ಅಧ್ಯಕ್ಷರಾದ ಶ್ರೀ ಹನುಮಂತಪ್ಪ ತೊಗ್ರಿ ಅವರೂ, ಜಿಲ್ಲಾಧಿಕಾರಿ ಶ್ರೀ ಸುಭಾಶ್ಚಂದ್ರ ಐ.ಎ.ಎಸ್. ಉಪಸ್ಥಿತರಿದ್ದು ರಾಜ್ಯ ಪರಿಷತ್ ಸಭೆಯನ್ನು ವಿದ್ಯುಕ್ತವಾಗಿ ಉದ್ಘಾಟಿಸಿದರು.

ರಾಜ್ಯ ಸಂಸ್ಥೆಯ ಪರಿಷತ್ತಿನ 77 ಮಹಾಸಭೆ ಮಾಜಿ ಮುಖ್ಯಮಂತ್ರಿ ಶ್ರೀ ಎಂ. ವೀರಪ್ಪಮೊಯಿಲಿಯವರ ಗೈರು ಹಾಜರಿಯಲ್ಲಿ ಉಪಾಧ್ಯಕ್ಷರಲ್ಲಿ ಹಿರಿಯರಾದ ಮೇಜರ್ ನಾರಾಯಣಸಿಂಗ್ ಅವರ ಅಧ್ಯಕ್ಷತೆಯಲ್ಲಿ ನೆರವೇರಿತು.

ಜಿಲ್ಲಾ ಆಯುಕ್ತರುಗಳಾದ ಶ್ರೀ ಕೆ. ತಿಮ್ಮಯ್ಯ, ಶ್ರೀಮತಿ ಮರ್ಸಿ ರಾಜಕುಮಾರ್, ಕಾರ್ಯದರ್ಶಿಗಳಾದ ಶ್ರೀ ಆರ್. ನರಸಿಂಹಮೂರ್ತಿ ಅವರ ವಿಶೇಷ ನಿರ್ವಹಣೆಯಿಂದ ಆಗಮಿಸಿದ್ದ ಎಲ್ಲ ಸದಸ್ಯರ ಮನ ಸಂತೃಪ್ತಿಯ ಊಟೋಪಚಾರಗಳ ವ್ಯವಸ್ಥೆ ಮತ್ತು ಆಕರ್ಷಕ ನೆನಪಿನ ಕಾಣಿಕೆಗಳ ನೀಡಿಕೆ ಅಷ್ಟೇ ಅಲ್ಲದೆ ಕಾರ್ಯಕಲಾಪಗಳೂ ಸುಸೂತ್ರವಾಗಿ ಜರುಗಿ, ಎಲ್ಲರಿಗೂ ಹರ್ಷವನ್ನುಂಟುಮಾಡಿತು.

ಇದೇ ಸಂದರ್ಭದಲ್ಲಿ ಇತ್ತೀಚಿಗಿನ ಮೊದಲ ಕನ್ನಡ ಪ್ರಕಟಣೆ "ಕಬ್ ಮಾಸ್ಟರುಗಳ ಕೈಪಿಡಿ" (ಶ್ರೀ ನೀಲಕಂಠಂ ರವರ ಆಂಗ್ಲ ರಚನೆ—ಶ್ರೀ ರಾ. ಚಂದ್ರಶೇಖರ್‌ರವರ ಅನುವಾದ) ಯನ್ನು ಬಿಡುಗಡೆ ಮಾಡಲಾಯಿತು.

ರಾಜ್ಯ ಪ್ರಧಾನ ಕಛೇರಿಯ ಪರವಾಗಿ ಜಿಲ್ಲಾ ಪದಾಧಿಕಾರಿಗಳೆಲ್ಲರಿಗೂ ಹೃತ್ಪೂರ್ವಕ ವಂದನೆಗಳನ್ನು ಅರ್ಪಿಸಲಾಯಿತು

## ಅಭಿನಂದನೆ

1995–96ನೇ ಸಾಲಿನ ರಾಷ್ಟ್ರೀಯ ಪ್ರಶಸ್ತಿ ವಿಜೇತರಾದ ಈ ಕೆಳಕಂಡ ಸ್ಕೌಟರು ಮತ್ತು ಗೈಡರುಗಳನ್ನು ರಾಜ್ಯ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳ ಪರವಾಗಿಯೂ, ಸ್ಕೌಟ್ ಮತ್ತು ಗೈಡ್‌ಗಳ ಪರವಾಗಿಯೂ ಹಾರ್ದಿಕವಾಗಿ ಅಭಿನಂದಿಸುತ್ತೇವೆ.

ಶ್ರೀಮತಿ ವಾಸಂತಿಬಾಯಿ ಜಗಜಿನಗಿ

ಶ್ರೀ ಐ. ಎ. ಕೈರನ್ನ

ಶ್ರೀ ದತ್ತಾತ್ರಿ

ಶ್ರೀ ಎನ್. ಎಂ. ಗುರುಸ್ವಾಮಿ

ಶ್ರೀ ಎ. ಪಿ. ನಾಗೇಶರಾವ್

ಶ್ರೀ ಟಿ. ಆರ್. ಪಿ. ನಾಯ್ಡು

ಈ ಪ್ರಶಸ್ತಿ ವಿಜೇತರು 7–11–95ರಂದು, ರಾಷ್ಟ್ರಪತಿ ಭವನದಲ್ಲಿ ಭಾರತದ ರಾಷ್ಟ್ರಪತಿ ಶ್ರೀ ಶಂಕರ ದಯಾಳ್ ಶರ್ಮರವರಿಂದ ಪ್ರಶಸ್ತಿ ಸ್ವೀಕಾರ ಮಾಡುವರು.

# ಜಿಲ್ಲಾ ವಾರ್ತೆ

**ರಸ್ತೆ ಸುರಕ್ಷತಾ ಶಿಬಿರಗಳು :**

ಕೊಡಗು ಜಿಲ್ಲಾ ಸಂಸ್ಥೆಯ ಆಶ್ರಯದಲ್ಲಿ 14-9-95 ರಂದು ಮಡಕೇರಿಯಲ್ಲಿಯೂ, 15-9-95 ರಂದು ವಿರಾಜಪೇಟೆ ಮತ್ತು ಸೋಮವಾರಪೇಟೆಗಳಲ್ಲಿಯೂ, ರಸ್ತೆ ಸುರಕ್ಷತಾ ಶಿಬಿರಗಳು ನಡೆದುವು. ಆಯಾ ತಾಲ್ಲೂಕುಗಳ ಎಲ್ಲಾ ಸ್ಕೌಟ್ ಗೈಡುಗಳೂ ಅಧಿಕ ಸಂಖ್ಯೆಯಲ್ಲಿ ಭಾಗವಹಿಸಿದ್ದರು. ಅಷ್ಟೇ ಅಲ್ಲದೆ ಆಯಾ ತಾಲ್ಲೂಕು ಶಾಲೆಗಳ 8, 9, 10ನೇ ತರಗತಿಯ ವಿದ್ಯಾರ್ಥಿಗಳೂ ಭಾಗವಹಿಸಿದ್ದರು. ಈ ಶಿಬಿರಗಳನ್ನು ಮುಖ್ಯ ಟ್ರಾಫಿಕ್ ವಾರ್ಡನ್ ಶ್ರೀ ಎಂ. ಎ. ಸೋಮಣ್ಣನವರು ಅವರ ಸಿಬ್ಬಂದಿ ವರ್ಗದವರೂ ಸಮರ್ಪಕವಾಗಿ ನಿರ್ವಹಿಸಿದರು. ವಾಹನ ಸಂಚಾರ ವ್ಯವಸ್ಥೆ, ಮತ್ತು ವಾಹನ ಸಂಚಾರ ನಿಯಾಮಕದ ಬಗ್ಗೆ ಸ್ಕೌಟ್ ಗೈಡ್‌ಗಳು ಮಾಹಿತಿ ಮತ್ತು ಪ್ರಾಯೋಗಿಕ ಶಿಕ್ಷಣ ಪಡೆದರು.

**ರಾಷ್ಟ್ರೀಯ ಭಾವೈಕ್ಯತಾ ಶಿಬಿರಗಳು, ಅಹಮದಾಬಾದ್ ಮತ್ತು ತಿರುವನಂತಪುರ**

ರಾಷ್ಟ್ರ ಕಛೇರಿಯ ವತಿಯಿಂದ ಗುಜರಾತ್ ರಾಜಧಾನಿಯಾದ ಅಹಮದಾಬಾದ್‌ನಲ್ಲಿ 15-9-95ರಿಂದ 24-9-95 ರವರೆಗೆ ನಡೆದ ರಾಷ್ಟ್ರೀಯ ಭಾವೈಕ್ಯತಾ ಶಿಬಿರದಲ್ಲಿ, ರಾಜ್ಯದ ಪರವಾಗಿ, ಗುಲ್ಬರ್ಗಾ ಜಿಲ್ಲೆಯ 8 + 1 ಸ್ಕೌಟ್‌ಗಳು ಭಾಗವಹಿಸಿದ್ದರು.

ಕೇರಳದ ತಿರುವನಂತಪುರದಲ್ಲಿ 29-9-95 ರಿಂದ 8-10-95 ರವರೆಗೆ ನಡೆದ ರಾಷ್ಟ್ರೀಯ ಭಾವೈಕ್ಯತಾ ಶಿಬಿರದಲ್ಲಿ ಬೆಂಗಳೂರು ಉತ್ತರ ಜಿಲ್ಲೆಯ 8 ಸ್ಕೌಟುಗಳೂ, ಒಬ್ಬ ಸ್ಕೌಟರೂ ಭಾಗವಹಿಸಿದ್ದರು.

**ಸಿಂಗಪೂರ್‌ನಲ್ಲಿ ಪ್ರಥಮ ಪ್ರಾದೇಶಿಕ ಯುವ ವೇದಿಕೆಯ ಸಭೆ :**

ಸ್ಕೌಟ್ ಸಮಾವೇಶಕ್ಕೆ ಮುಂಚಿತವಾಗಿ ಇದೇ ಜೂನ್ ತಿಂಗಳಿನಲ್ಲಿ ಏಷಿಯಾ ಪೆಸಿಫಿಕ್ ಪ್ರಾದೇಶಿಕ ಯುವ ವೇದಿಕೆಯ ಸಭೆಯು ಸಿಂಗಪೂರ್‌ನಲ್ಲಿ ನಡೆಯಿತು. 12 ರಾಷ್ಟ್ರೀಯ ಸ್ಕೌಟ್ ಸಂಸ್ಥೆಗಳ ಪ್ರತಿನಿಧಿಗಳೂ, 8 ಸ್ಕೌಟೇತರ ಯುವ ಸಂಸ್ಥೆಗಳು ಮತ್ತು ಶೈಕ್ಷಣಿಕ ಸಂಸ್ಥೆಗಳ ವೀಕ್ಷಕರೂ ಸೇರಿ 44 ಜನರು ಭಾಗವಹಿಸಿದ್ದರು. ಇದೇ ಮೊದಲ ಬಾರಿಗೆ ವಿಶ್ವ ಅಥವಾ ಪ್ರಾದೇಶಿಕ ಮಟ್ಟದಲ್ಲಿ ನಡೆಯುವ ವೇದಿಕೆಯ ಸಭೆಯಲ್ಲಿ ಸ್ಕೌಟೇತರ ಸಂಸ್ಥೆಗಳಿಗೆ ಭಾಗವಹಿಸಲು ಅವಕಾಶ ನೀಡಲಾಗಿದ್ದಿತು. ಪ್ರತಿನಿಧಿಗಳು, ಈ ರೀತಿಯ ಭಾಗವಹಿಸುವಿಕೆಯನ್ನು ಮುಂದುವರೆಸಿಕೊಂಡು ಹೋಗಲು ಶಿಫಾರಸ್ಸು ಮಾಡಿದ್ದರು.

ವೇದಿಕೆಯ ಸಭೆಯಲ್ಲಿ ಭಾಗವಹಿಸಿದ ಅನೇಕ ಪ್ರತಿನಿಧಿಗಳು, ಸಿಂಗಪೂರ್‌ನಲ್ಲೇ ನಿಂತು ಮುಂದೆ ನಡೆದ ಪ್ರಾದೇಶಿಕ ಸ್ಕೌಟ್ ಸಮಾವೇಶದ ಸದಸ್ಯ ಪ್ರತಿನಿಧಿಗಳಾಗಿ ಪಾಲ್ಗೊಂಡರು.

**ವಿಳಂಬವಾಗಿ ಬಂದು ಉಳಿದುಕೊಂಡಿರುವ ಎಲ್ಲಾ ಸುದ್ದಿ ಸಮಾಚಾರಗಳನ್ನು ಮುಂದಿನ ಸಂಚಿಕೆಯಲ್ಲಿ ಕೊಡಲಾಗುವುದು**

# REPORT OF ACTIVITIES

## Basic Course

Mysore Rural District Association Organised a Basic Course for Scout Masters and Cub Masters held at Mahila Vidya Peetha, Chamarajanagar Road, Nanjangud, from 18-8-1995. Smt. Amruthamma was the leader of the Cub Course, 25 teachers under went the Training. Sri Nandallar, ALT (S) was the leader of the Scout Course, 40 teachers under went the Training.

## State Level Advance Courses

Advance Course for Scout Masters and Cub Masters held at Kondajji Basappa Scouts and Guides Training Centre, Kondajji from 18th August 1995. Sri B. Manjunath was the leader of the Scout Masters Course, 39 Scouters attended the Course. Sri S. P. Poonacha LT (C) was the leader of the Cub masters Course, 20 Cub masters attended the Course.

The Advance Course for Scout Masters and Cub Masters held at Besant Park, Doddaballapur, from 18th August 1995. Sri S. Paulraj LT (S) was the leader of the Scout Masters Course and Smt. Hema Vijayakumar LT (C) was the leader of the Cub Masters Course, 17 persons attended the Cub Course. 23 persons attended the Scout Course.

## ASOC's / DOC's Meet

The ASOC's and DOC's meet was held at Besant Park, Doddaballapur from 31-7-1995 to 2-8-1995, 25 ASOC's and DOC's attended the meet.

## Conference of Scouters and Guiders

The Conference of Scouters and Guiders was held at Scout Bhavan, Tumkur on 20-8-1995, 65 Scouters and Guiders attended the conference.

Raichur District Association Organised a Scouters and Guiders Conference at Scout Bhavan, Raichur on 27-7-1995, 80 Scouters and Guiders participated.

Gulbarga District Association Organised a Scouters and Guiders Conference at Gulbarga during August 1995.

Bangalore North District Association Organised a Scouters and Guiders Conference at State Headquarters, Fort, Bangalore on 22-7-1995, 100 Scouters and Guiders participated.

Yelahanka Local Association Organised a Scouters and Guiders Conference at M.E.C. School, Yelahanka on 7-7-1995, 20 Scouters and Guiders Participated.

## Rovers Rangers Samagam

The Bhadravathi Local Association Organised Rovers, Rangers Samagam on 30-7-1995, 50 Rovers and Rangers Participated.

## General Information Courses

The Bidar District Association, Bharat Scouts and Guides, Bidar organised an Information Course for Head's of the Institutions held at Bidar on 7-8-1995. Sri B. H. Manjunath, IAS, Deputy Commissioner, Bidar was the Chief Guest.

The Bangalore Rural District Association organised following General Information Courses.

Channapatna Local Association on 17-8-1995, 75 participants.
Basavanagudi Local Association on 18-8-1995, 120 participants.
Doddaballapur Local Association on 18-8-1995, 60 participants.
Hoskote Local Association on 21-8-1995, 60 participants.
Kanakapura Local Association on 22-8-1995, 60 Teachers.
Ramanagar Local Association on 25-8-1995, 50 participants.

## Felicitation Function at Chitradurga

A Felicitation Function was held at Chitradurga, to Felicitate Sri V. P. Deenadayalu Naidu, National Commissioner, Bharat Scouts and Guides, India. The District Association also Felicitated Sri C. R. Mohamad Zahiruddin, Assistant State Commissioner (S), Sri T. M. Kumar, D D.P.I., Former District Commissioner (S), Chitradurga, Sri P. H. Deemaiah, Former District Secretary and Sri B. Kalaiah, D.D.P.I. Chitradurga, Sri K. B. Shanmukhappa, State Chief Commissioner, Bharat Scouts and Guides, Karnataka, presided over the function.

## Badge Work Camps

The following Districts conducted Badge Work Camps under Plan Grant, sanctioned by the State Headquarters.

1. Badge Work Camp for Guides held at Kadakola, Mysore, 60 Guides participated (Mysore Rural District Organised).
2. Shimoga District Association Organised Badge Work Camp for Guides at Gajanur, from 11-7-1995 to 15-7-1995, 60 Guides participated.
3. Bijapur District Association Organised a Divisional Level Badge Work Camp for Guides at Scout Bhavan Bijapur, from 17th to 21st August 1995, 60 Guides participated.
4. Bijapur District Association also Organised a Badge Work Camp for Scouts at Scout Bhavan, Bijapur from 17th to 21st August 1995, 100 Scouts participated.
5. Hassan District Association Organised a Badge Work Camp for Scouts at Hassan from 11-8-1995 to 15-8-1995, 100 Scouts participated
6. Gulbarga District Association Organised a Badge Work Camp at Gulbarga for 100 Scouts & Guides of Raichur & Gulbarga Districts from 6-9-95 to 10-9-95.
7. Bellary District Association Organised a Badge Work Camp at Kamalapur from 9-9-1995 to 13-9-1995. 100 Scouts participated.

## Environment Day

The Chamarajpet Local Association Organised Environment Day Celebration on 31-7-1995 at State Headquarters, Fort, Bangalore-560 002. 800 Scouts, Guides, Cubs Bulbuls, Scouters, Guiders participated. Smt. H. Premadevi, Director of Secondery Education, Prof. M. Suryanarayanappa, State Secretary was the Chief Guest.

Yelahanka Local Association Organised Tree Plantation Programme at Yelahanka on 5-8-1995.

Major Gen. P. N. Nayar (Retd.) Honorary incharge of Poornapragna Education Centre, Yelahanka addressed Scouts and Guides Mr. N. Chandrashekar, District Commissioner, (Scouts) Bangalore North presided. Mr. Kulkarni, Bangalore North District Secretary and Mr. Ram Singh, A.D C. (Scouts) supervised the Shramadan by Scouts and Guides.

Raichur District organised Tree Plantation Programme at Hutti on 26-9-95.

## Testing Camps for Rajyapuraskar Scouts

State Level Testing Camps for Rajyapuraskar Scouts was held at District Headquarters of the following Districts.

| | Name of the District | Date | Leader of the Camp |
|---|---|---|---|
| 1. | Davangere | 30-07-1995 | Sri P. G. Pandith<br>Sri Varambally |
| 2. | Chitradurga | 08-08-1995 | Sri Chandra Prakash |
| 3. | Chikmagalur | 06-08-1995 | Sri K. S. Shivakumar |
| 4. | Dharwad | 23-07-1995 | Sri B Manjunath |
| 5. | Dakshina Kannada | 12-08-1995 | Sri C. S. Reddy |
| 6. | Dakshina Kannada | 13-08-1995 | Sri Mohamad Wasil |
| 7. | Gulbarga | 13-08-1995 | Sri Madhav Rao Janwadkar |
| 8. | Mysore City | 13-08-1995 | Sri Narayana Shetty |
| 9. | Mysore Rural | 13-08-1995 | Sri Samuel Satya Kumar |
| 10. | North Kanara | 20-08-1995 | Sri Sadashiva Bhat |
| 11. | Bangalore North &<br>Bangalore Rural | 20-08-1995 | Sri N. Srinivasan |
| 12. | Tumkur | 21-08-1995 | Sri E. Shivappa |
| 13. | Bijapur | 20-08-1995 | Sri T. A. Manjunath |
| 14. | Bangalore North | 20-08-1995 | Sri N. Sreenivasan |

The Bangalore North District Organised Preparatory Camp for Rajyapuraskar Scouts at State Headquarters on 30-7-199, 6-8-1995 and 13-8-1995.

THE BHARAT SCOUTS AND GUIDES, KARNATAKA

No. 1, Kondajji Basappa Road, Fort, Bangalore-560 002

# MAINTENANCE OF THE GUEST HOUSE

at State Headquarters

Rules as approved at the State Executive Committee at its meeting held on 16th July 1995

| | | Rate (Per head per day) |
|---|---|---|
| 1. | Scouts and Guides | |
| 2. | Scouters and Guiders | Rs. 5-00 |
| 3. | Members of the State Executive Committee, State Council, Commissioners of all Ranks Office-Bearers of Local and District Association | Rs. 10-00 |
| 4. | Life Members-Ordinary Members and those recommended by the District and National Headquarters Officials and Representatives from the National Headquarters and other States | Rs. 20-00 |
| 5. | Officials from other Departments and Organisations | Rs. 25-00 |

## NOTICE

1. Checkout time 24 Hours from the time of Occupation.
2. Entry Should be made in their own Handwriting in the "LIVE REGISTER" maintained at the office (I/c) Name and address, Date and time of Arrival, Purpose of the visit, date and time of departure.
3. Any loss or theft of valuables of the lodgers/in mates will be at his/her/their own responsibility.
4. Reservation will be made by the State Secretary with prior request from the concerned.
5. The Beddings and all other belongings in the Guest House should be carefully handled by the lodgers.
6. Reservation for any Extension of stay in the Guest House should be intimated in advance and subject to availability and discretion of State Secretary.
7. If any of the property/belongings in the guest house are damaged by the lodgers/inmates the necessary damage charges shall be recovered from the lodgers/inmates.
8. It is also requested to maintain the Premises clean and tidy.

By Order
State Secretary

**Information to :**

1. All the Members of the State Executive Committee.
2. All the District Commissioner (S) & (G).
3. All the ASOC (S) & (G) and DOC (S) & (G).
4. The Accountant Scouts and Guides Section.
5. The Joint State Secretary (G).
6. File pertaining the maintenance of the Guest House.
7. Notice Board at the Guest House.

# ರಾಷ್ಟ್ರೀಯ ವಾಯು ಸ್ಕೌಟರುಗಳು, ಗೈಡರುಗಳು, ನಾಯಕರುಗಳ ಶಿಬಿರ

## (21-9-1995 ರಿಂದ 30-9-1995 ರ ವರೆಗೆ)

ಮೇಲ್ಕಂಡ ಶಿಬಿರವು ಬೆಂಗಳೂರಿನ ಹೆಚ್.ಎ.ಎಲ್.ನಲ್ಲಿ ನಡೆಯಿತು. ಶಿಬಿರವನ್ನು 21-9-1995 ರಂದು ಹಿಂದೂಸ್ಥಾನ್ ವಿಮಾನ ಕಾರ್ಖಾನೆಯ ಸುಕ್ಷೇಮ, ನ್ಯಾಯ ಮತ್ತು ಕ್ಷೇತ್ರಗಳ ಮುಖ್ಯ ನಿರ್ವಾಹಕರಾದ ಶ್ರೀ ಕಪೂರ್ ರವರು ಉದ್ಘಾಟಿಸಿದರಲ್ಲದೆ, ಶಿಬಿರದ ಎಲ್ಲಾ ರೀತಿಯ ಸೌಕರ್ಯಗಳಿಗೂ ತಾವೇ ಜವಾಬ್ದಾರಿಯನ್ನು ವಹಿಸಿಕೊಂಡರು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಮುಖ್ಯ ಅತಿಥಿಗಳಾಗಿದ್ದರು. ರಾಷ್ಟ್ರೀಯ ಆಯುಕ್ತರಾದ ಶ್ರೀ ವಿ. ಪಿ. ದೀನದಯಾಳು ನಾಯ್ಡು ರವರು ಅಧ್ಯಕ್ಷತೆ ವಹಿಸಿದ್ದರು. ಈ ಸಂದರ್ಭದಲ್ಲಿ ರಾಜ್ಯ ಪ್ರಧಾನ ಆಯುಕ್ತರು, ಶ್ರೀ ಪಿ. ಎಂ. ಕಪೂರ್‌ರವರಿಗೆ ಸಂಸ್ಥೆಯ ಪರವಾಗಿ ಕೃತಜ್ಞತಾ ಪದಕವನ್ನು ನೀಡಿ ಗೌರವಿಸಿದರು. ಉತ್ತಮ ರೀತಿಯಲ್ಲಿ ಆಹಾರ ವ್ಯವಸ್ಥೆಯನ್ನು ಮಾಡಿದ್ದ ಮುಖ್ಯ ಜಾಗೃತಿ ಮತ್ತು ಬಂದೋಬಸ್ತು ಅಧಿಕಾರಿಗಳಾದ ಲೆ॥ ಕ॥ ರಮೇಶ್ ನಾಯರ್‌ರವರನ್ನೂ, ಶಿಬಿರದ ವ್ಯವಸ್ಥೆಗೆ ಕಾರಣೀಭೂತರಾದ ಹೆಚ್.ಎ.ಎಲ್.ನವರೇ ಆದ ಶ್ರೀ ಟಿ. ಎಸ್. ಲೂಕಾಸ್ ಮತ್ತು ಶ್ರೀ ಟಿ. ಆರ್. ಪಿ. ನಾಯ್ಡು ರವರನ್ನು ಶ್ಲಾಘಿಸಿದರು.

ದ॥ ಪ್ರಾ॥ ನಿರ್ದೇಶಕರಾದ ಶ್ರೀ ಕುಂಜಿತಪಾದಂರವರು ಶಿಬಿರದ ನಾಯಕರಾಗಿದ್ದರು. ಶ್ರೀ ಟಿ. ಆರ್. ಪಿ. ನಾಯ್ಡು ರವರು ಶಿಬಿರದ ಸಮನ್ವಯಕರಾಗಿಯೂ, ಶ್ರೀ ಕೆ. ತಿಮ್ಮಪ್ಪ ಮತ್ತು ಶ್ರೀ ಕೆ. ಎಸ್. ಶಿವಕುಮಾರ್‌ರವರು ಸಹಾಯಕರಾಗಿಯೂ ಕೆಲಸ ಮಾಡಿದರು.

ಪೂರ್ವ ರೈಲ್ವೆ, ಕರ್ನಾಟಕ, ಮಹಾರಾಷ್ಟ್ರ, ಮಿಝೋರಾಂ, ಮಣಿಪೂರ್, ಒರಿಸ್ಸಾ, ಪಂಜಾಬ್ ಮತ್ತು ತಮಿಳುನಾಡು ರಾಜ್ಯಗಳಿಂದ 8 ಮಹಿಳೆಯರೂ ಸೇರಿದಂತೆ ಒಟ್ಟು 48 ಮಂದಿ ಶಿಕ್ಷಣ ಶಿಬಿರದಲ್ಲಿ ಭಾಗವಹಿಸಿದ್ದರು. ಈ 48 ಶಿಕ್ಷಣಾರ್ಥಿಗಳಲ್ಲಿ 23 ಜನರು ಕರ್ನಾಟಕದವರೇ ಆಗಿದ್ದು ಅವರುಗಳು ಬೆಂಗಳೂರು, ದಕ್ಷಿಣ ಕನ್ನಡ, ಬೀದರ್, ಕೊಡಗು ಮತ್ತು ಬೆಳಗಾಂ ಜಿಲ್ಲೆಯವರಾಗಿದ್ದುದು ಗಮನಾರ್ಹವಾಗಿದೆ.

ಶಿಕ್ಷಣ ಕಾರ್ಯಕ್ರಮದಲ್ಲಿ : 1. ವಾಯುಯಾನದ ಚರಿತ್ರೆ 2. ಭಾರತೀಯ ವಾಯುಪಡೆಯ ಚರಿತ್ರೆ 3. ಉಡ್ಡಾನದ ಕಾರ್ಯಾಚರಣೆ ಮತ್ತು ನಿಯಂತ್ರಣ 4. ರಾಡಾರ್‌ನ ಕಾರ್ಯಾಚರಣೆ 5. ವಿಮಾನಗಳ ಅಭಿಜ್ಞಾನ ಮತ್ತು ವಿವಿಧ ರೀತಿಯ ವಿಮಾನಗಳು 6. ವಿಮಾನ ಚಾಲನೆ 7. ವಿಮಾನಗಳ ತಯಾರಿ— ಹೆಚ್.ಎ.ಎಲ್. ಬಗ್ಗೆ ವಿವರಣೆ 8. ವಾಯುಯಾನ ಮತ್ತು ಉಡ್ಡಾನದ ಬಗ್ಗೆ ಸಾಮಾನ್ಯ ತಿಳುವಳಿಕೆ ಮತ್ತು ವಿಧಿ ವಿಧಾನಗಳು 9. ಅನ್ವೇಷಣೆ ಮತ್ತು ಸಂರಕ್ಷಣೆ (ಅಪಘಾತಗಳ ವೇಳೆ ತಲಾಶ್ ಮಾಡುವುದು ಮತ್ತು ಸಂರಕ್ಷಿಸುವುದು) 10. ವಿಮಾನ ನಮೂನಾ ತಯಾರಿಕೆ ಮತ್ತು 11. ವಾಯುಸೇನಾ ಪದಕಗಳು ಮತ್ತು ಅವುಗಳ ಗಳಿಕೆ, ಈ ವಿಷಯಗಳನ್ನು ಅಳವಡಿಸಲಾಗಿತ್ತು. ಬೋಧನೆಯ ಜೊತೆಗೆ ಪ್ರಾಯೋಗಿಕ ಶಿಕ್ಷಣವನ್ನು ಸಹ ನೀಡಲಾಯಿತು.

ವಿಂಗ್ ಕಮಾಂಡರ್ ಪತ್ರವಾಲಾ, ಶ್ರೀ ರಾಮ್ ಪ್ರಸಾದ್, ಶ್ರೀ ಪಿ. ಸೆಲ್ವರಾಜ್, ಕಮಾಂಡರ್ ಪಿ. ಎಂ. ರಾವ್, ಶ್ರೀ ವಿ. ಎಸ್. ಮೂರ್ತಿ, ಗ್ರೂಪ್ ಕ್ಯಾಪ್ಟನ್ ಜಿ. ರಂಗರಾಜನ್, ಸ್ಕ್ವಾಡ್ರನ್ ಲೀಡರ್ ಹರಿಶಂಕರ್ ಲೆ॥ ಕ॥ ಕೃಷ್ಣಕುಮಾರ್ ಮತ್ತು ಶ್ರೀ ದೇವರಾಜು ಅವರುಗಳು ಶಿಕ್ಷಕ ತಂಡದಲ್ಲಿದ್ದರು.

ಶ್ರೀಯುತರುಗಳಾದ ಮನ್‌ಚಂದಾಜೀ, ಜಂಟಿ ನಿರ್ದೇಶಕರು (ಸ್ಕೌಟ್ಸ್) ರಾಷ್ಟ್ರೀಯ ಕಛೇರಿ ಮತ್ತು ಸುತಾರ್, ಸಾಹಸಿಕ ಕಾರ್ಯಕ್ರಮಾಧಿಕಾರಿಗಳು, ಪಚಮಢಿ, ಹಾಗೂ ಶ್ರೀಮತಿ ಪುಷ್ಪ ನಾಡಕರ್ಣಿ, ಉಪನಿರ್ದೇಶಕರು (ಗೈಡ್ಸ್) ರಾಷ್ಟ್ರೀಯ ಕಛೇರಿ ಇವರುಗಳು ಶಿಬಿರಾರ್ಥಿಗಳನ್ನುದ್ದೇಶಿಸಿ ಮಾತನಾಡಿದರು.

29-9-1995 ರಂದು ನಡೆದ ಮುಕ್ತಾಯ ಸಮಾರಂಭದಲ್ಲಿ ಪ್ರಧಾನ ಜಾಗೃತಿ ಮತ್ತು ಬಂದೋಬಸ್ತು ಅಧಿಕಾರಿಗಳಾದ ಲೆ॥ ಕ॥ ರಮೇಶ್ ನಾಯರ್, ಸಹಾಯಕ ಜನರಲ್ ಮ್ಯಾನೇಜರ್ ಶ್ರೀ ಎಸ್. ಅರುಣಾಚಲಂ ಮತ್ತು ಡೆ॥ ಜನರಲ್ ಮ್ಯಾನೇಜರ್, ವಿಂಗ್ ಕಮಾಂಡರ್ ಪತ್ರವಾಲಾ ಇವರುಗಳಿಗೆ ರಾಜ್ಯ ಪ್ರಧಾನ ಆಯುಕ್ತರ ಪರವಾಗಿ ಶ್ರೀ ಕುಂಜಿತಪಾದಂರವರು "ಕೃತಜ್ಞತಾ ಪದಕ"ವನ್ನು ನೀಡಿ ಗೌರವಿಸಿದರು.

# 'ಪೋಲಿಯೊ', ಇದೊಂದು ಭಯಾನಕ ರೋಗ.

ಇದು ಮಕ್ಕಳಿಗೆ ಶಾಶ್ವತ ಅಂಗವಿಕಲತೆ ಉಂಟು ಮಾಡುತ್ತದೆ.

ಪೋಲಿಯೊ ನಿರ್ಮೂಲನೆ ಮಾಡೋಣ. ಇದು ನಮ್ಮೆಲ್ಲರ ಜವಾಬ್ದಾರಿ.

ಬನ್ನಿ, "ಪಲ್ಸ್ ಪೋಲಿಯೊ ಲಸಿಕೆ" ಕಾರ್ಯಕ್ರಮದಲ್ಲಿ ಭಾಗವಹಿಸೋಣ.

ರಾಜ್ಯಾದ್ಯಂತ

## 'ಪಲ್ಸ್ ಪೋಲಿಯೊ ಲಸಿಕೆ'

ಕಾರ್ಯಕ್ರಮ

ದಿನಾಂಕ **9-12-1995** (ಎರಡನೆ ಶನಿವಾರ)

ಮತ್ತು

ದಿನಾಂಕ **20-1-1996** (ಶನಿವಾರ)

WHEN WEALTH IS LOST
NOTHING IS LOST

WHEN HEALTH IS LOST
SOMETHING IS LOST

WHEN CHARACTER IS LOST
EVERYTHING IS LOST

LOSE NOT
THAT IS PRECIOUS





To,
Smt. Usha Ramaiah, LT(G),
No. 124, 42nd Cross, 8th Block,
Jayanagar, BANGALORE - 560041.

THE BHARAT SCOUTS AND GUIDES
Prof. P. Sivashankar Circle
Kondajji Basappa Road
Fort, Bangalore-560 002

Published for the Bharat Scouts and Guides, Karnataka State Headquarters, Prof. P. Sivashankar Circle, Kondajji Basappa Road Fort, Bangalore-560 002, by the State Secretary and Printed by Sri B. Basavaiah, M.D. at S.J.M. Mudrana Pvt. Ltd. Bangalore-560 027 Phone : 2236469